# ಲೋಚನ

೨

ಸಂಪುಟ ೧
ಸಂಚಿಕೆ ೨

ಡಿಸೆಂಬರ್
೧೯೮೩




## ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ

ವಾರ್ಷಿಕ ಚಂದಾ : ರೂ. ೬–೦೦ ಬಿಡಿ ಸಂಚಿಕೆ : ರೂ. ೪–೦೦

# ' ಲೋಚನ '



## ಲೇಖನಗಳು–ಟಿಪ್ಪಣಿಗಳು

19–12–1982ರಂದು ನಡೆದ ಪ್ರತಿಷ್ಠಾನದ ಕಾರ್ಯಸಮಿತಿಯಲ್ಲಿ ಅಂಗೀಕೃತವಾದ ನಿರ್ಣಯ "ಸಂಸ್ಥಾಪಕ ಕಾರ್ಯದರ್ಶಿಯವರ ಸೂಚನೆಯಂತೆ, ಬರುವ 1983ನೆಯ ವರ್ಷದಿಂದ ಸಂಶೋಧನಾತ ಪಾಂಡಿತ್ಯಪೂರ್ಣ ಲೇಖನಗಳು ಹಾಗೂ ಹೊಸದಾಗಿ ಪ್ರಕಟವಾಗುವ ಉತ್ತಮ ಮಟ್ಟದ ಸಂಪಾದಿ ಗ್ರಂಥಗಳು ಮತ್ತು ಶಾಸ್ತ್ರ ಸಾಹಿತ್ಯದ ಗ್ರಂಥಗಳು–ಇವುಗಳ ಮೇಲಣ ವಿಮರ್ಶೆಗಳು, ವಿದ್ವದ್ವಿಚಾ ಮತ್ತು ವಿದ್ವತ್ ಪ್ರಪಂಚದ ವಿದ್ಯಮಾನ ಇವುಗಳಿಗೆ ಸಂಬಂಧಿಸಿದ ಟೀಕೆ ಟಿಪ್ಪಣಿಗಳು–ಇವುಗಳ ಮೀಸಲಾದ ತದ್ವತ್‌ಪತ್ರಿಕೆಯನ್ನು ವರ್ಷಕ್ಕೆ ಎರಡು ಸಲ (ಜೂನ್ ಮತ್ತು ಡಿಸೆಂಬರ್) ಪ್ರಕಟ ಬಹುದೆಂದೂ ಈ ಪತ್ರಿಕೆಗೆ "ಲೋಚನ" ಎಂಬ ಹೆಸರನ್ನು ಇಡಬಹುದೆಂದೂ ತೀರ್ಮಾನಿಸಲಾಯಿತ ಪ್ರಾರಂಭದಲ್ಲಿ ಪತ್ರಿಕೆಯ ಗಾತ್ರ ಡೆಮಿ 1/8 ಆಕಾರದ 64 ಪುಟಗಳಷ್ಟು ಇರಬಹುದೆಂ ಸೂಚಿಸಲಾಯಿತು."

## ಲೇಖನಗಳಿಗೆ ಆಹ್ವಾನ

ಮೇಲ್ಕಂಡ ನಿರ್ಣಯದಲ್ಲಿ ವ್ಯಕ್ತಪಟ್ಟಿರುವ ಆಶಯಕ್ಕೆ ಅನುಗುಣವಾದ ಲೇಖನಗಳನ ವಿದ್ವಾಂಸರೂ ಭಾಷೆ ಸಾಹಿತ್ಯಗಳ ಪ್ರೌಢ ವಿದ್ಯಾರ್ಥಿಗಳೂ ಕಳಿಸಿಕೊಡಬೇಕೆಂದು ವಿನಂ 'ಲೋಚನ'ದ ಗಾತ್ರ ಪರಿಮಿತವಾದ್ದರಿಂದ ಲೇಖನಗಳು ಅಚ್ಚಿನ 6–8 ಪುಟಗಳ ಪರಿಮಿತಿಯ ಇದ್ದರೆ ಅನುಕೂಲ. ಟಿಪ್ಪಣಿಗಳು 1–2 ಪುಟಗಳ ಪರಿಮಿತಿಯಲ್ಲಿರಬಹುದು. ಲೇಖನಗ ಹಾಳೆಯ ಒಂದೇ ಪಕ್ಕದಲ್ಲಿ ಸ್ಫುಟವಾದ ಅಕ್ಷರಗಳಲ್ಲಿ ಬರೆದಿರಬೇಕು. ಅಡಿಟಿಪ್ಪಣಿಗಳನ್ನು ಪುಟ ಅಡಿಯಲ್ಲಿಯೇ ಕಾಣಿಸುವುದು ಒಳಿತು. ಗ್ರಂಥ–ಲೇಖನಾಧಾರ ವಿವರಗಳನ್ನು (Bibliograph ಲೇಖನದ ಕಡೆಯಲ್ಲಿ ಕೊಡಬಹುದು. ಯಾವುದೇ ಕಾರಣದಿಂದ ಲೇಖನವನ್ನು ಹಿಂದಿರುಗಿಸಲಾ ಪ್ರಯುಕ್ತ ಲೇಖಕರು ತಮ್ಮ ಲೇಖನದ ಒಂದು ಪ್ರತಿಯನ್ನು ಉಳಿಸಿಕೊಂಡಿರಬೇಕಾಗಿ ಕೋರಿಕೆ.

## ವಿನಿಮಯ ಪತ್ರಿಕೆಗಳು

(ಪ್ರತಿಷ್ಠಾನದ ವಾರ್ತಾಪತ್ರಿಕೆಗೆಂದು ಬರುತ್ತಿದ್ದ ವಿನಿಮಯ ಪತ್ರಿಕೆಗಳನ್ನು "ಲೋಚನ"ಕ್ಕೆ ಸ್ವೀಕರಿಸಲಾಗಿದೆ.)

೧. ಗೋಖಲೆ ಸಾರ್ವಜನಿಕ ವಿಚಾರ ಸಂಸ್ಥೆಯ "ಸಾರ್ವಜನಿಕ" (ಇಂಗ್ಲಿಷ್), ೨. ಸೋವಿಯತ್ ದೇಶ, ೩. ಲಹರಿ (ಮದರಾಸು), ೪. ಅಂಕಣ, ಬೆಂಗಳೂರು.

ವಿಮರ್ಶೆಗಾಗಿ ಗ್ರಂಥಗಳ ಎರಡು ಪ್ರತಿಗಳನ್ನು ಲೇಖಕರು ಕಳಿಸಬೇಕು.

ಸೃಜನಾತ್ಮಕ ಗ್ರಂಥಗಳನ್ನು ಸಾಧಾರಣವಾಗಿ ವಿಮರ್ಶೆ ಮಾಡಲಾಗುವುದಿಲ್ಲ : ಆದರೆ, ಕಳಿಸಿದರೆ 'ಸ್ವೀಕಾರ' ಭಾಗದಲ್ಲಿ ಗಮನಿಸಲಾಗುವುದು. ವೈಶಿಷ್ಟ್ಯವುಳ್ಳ ಗ್ರಂಥಗಳನ್ನು ಸಾಧ್ಯವಾದರೆ ಅವಲೋಕನ ಮಾಡಿಸಲಾಗುವುದು.

# LOCHANA

(A Half-yearly Journal Published by B M. Sri Memorial Foundation, 54, 3rd Cross, Gavipuram Extension, Bangalore-19)

*Chief Editor* : Prof. G. Venkatasubbiah

*Executive Editor* : Prof. M. V. Seetha Ramiah

*Editor* : T. R. Mahadeviah

*Vol. 1.* *December 1983* *No. 2.*

## CONTENTS

# ಪರಿವಿಡಿ

# ಲೋಚನ

ಸಂಪುಟ ೧ ಡಿಸೆಂಬರ್ ೧೯೮೩ ಸಂಚಿಕೆ ೨

## 'ಶ್ರೀ'ಯವರಿಗೆ

ಕನ್ನಡದ ಕಾವ್ಯ ಹರಿಗಟ್ಟಿನಿಂದ ಬರುಬಯಲ ಕ್ಷಾಮದಲ್ಲಿ
ನೀ ತಂದೆ ಬಂದೆ ಹರಿಕಾರನಾಗಿ ಬಾಳಿಸಲು ಕ್ಷೇಮವಲ್ಲಿ

ಕರೆದಿದ್ದೆ ಮಳೆಯ ಋಷಿಮಾಳ್ಕೆಯಿಂದ ಪರ್ಜನ್ಯ ಸೂಕ್ತ ಪಾಡಿ
ಕಡಲಾವಿ ಘನಿಸಿ ಮುಗಿಲೋಳಿ ಹಣಿಸಿ ಹರಿದಿತ್ತು ಅಮೃತ ಕೋಡಿ.

ಎಲ್ಲೆಲ್ಲು ಹಸಿರು ಹೂಗಂಪಿನುಸಿರು ಕಲಕಂಠ ವೃಂದಗಾನ
ನವ ಉದಯ ನೆರೆದು ರಸರಾಗ ಬೆರೆದು ಫಲಿಸಿತ್ತು ನಿನ್ನ ಧ್ಯಾನ.

ಆಂಗ್ಲೇಯ ಮನ್ನೆ ತಾಯ್ನುಡಿಯ ಚೆನ್ನೆ ಇವಳವಳ ತೊಡುಗೆ ಇಟ್ಟು
ನರ್ತನದ ಬಂಧ ಜನಪದದ ಛಂದ ಪದರಚನೆ ಜೇನುಹುಟ್ಟು.

ಗ್ರೀಕೀಯ ರುದ್ರರೂಪಕದ ಭಂಗಿ ಸ್ವಪ್ರಜ್ಞೆಯಲ್ಲಿ ಹೂತು
ನಡೆಸಿದ್ದೆ ರಂಗ ಅನುಭಾವಸಂಗ ಜಗವುಲಿಯೆ ಪೂತು ಪೂತು ।

ಕವಿಪಂಪ ರನ್ನ ನಾರಣರು ಧನ್ಯ ತವ ವಚನಸ್ರೋತವುಂಡು
ಶಿವಶರಣದಾಸಿ ಹರಿಚರಣವಾಸಿ ಭವಭಕ್ತಿ ಹೊಳವುಗೊಂಡು.

ನಾಡಗಲ ಇಡಿದ ಕಡು ಮಂಜು ಸರಿದು ರಂಜಿಸಿತು ಆತ್ಮಸ್ಫುರಣ
ಕರುಣಾಳು ದೊರೆಯೆ ಶ್ರೀಕಂಠ ಸಿರಿಯೆ ಚಿರವಿರಲಿ ನಿನ್ನ ಸ್ಮರಣ ।

—ಚಿದಂಬರ ದೀಕ್ಷಿತ

# ಶಾಮು ಶರ್ಮರ ಕೀರ್ತನೆಗಳು*

೧

### ಶ್ರೀ ವಿಶ್ವಕ್ಸೇನ ಪ್ರಾರ್ಥನೆ

ರಾಗ–ನಾಟ ತಾಳ–ಆದಿ

ಶ್ರೀನಾಥಾಜ್ಞಾಪ್ರಕಾರ ನಡೆಯುವ ಸೂತ್ರವತೀ ರಮಣ
ಮಾನಿತ ಪ್ರಧಾನ ಮಂತ್ರೀ ಪೂಜಿಪೆ ವಿಷ್ವೇಶಾ ನಮಿಪೆ ॥ ಪ ॥

ಬಿಳಿಯುಡೆ ತುಂಬಿದ ತಿಂಗಳ ಬೆಳಗ
ತೊಳಗುವ ನಾಲಕು ತೋಳುಗಳ
ಒಲಿದಿಹ ನಗೆಮೊಗ ವಿಷ್ಣು ನೆನೆವೆ
ಸುಲಭದಿ ಕಾರ್ಯವ ಗೈಸುವನೇ ॥ ೧ ॥

ದ್ವಿರದ ವಕ್ತ್ರ ತಾ ಮೊದಲಾಗಿರುವ
ಪರಿಜನ ನೂರ್ವರ ಕೂಡಿರುವೈ

---

* ಶಾಮುಶರ್ಮರು ಕೀರ್ತನ ಪ್ರಪಂಚಕ್ಕೆ ಹೊಸ ಪರಿಚಯ. ಬೆಂಗಳೂರು ಜಿಲ್ಲೆ, ದೊಡ್ಡಬಳ್ಳಾಪುರ ತಾಲ್ಲೂಕು, ದೊಡ್ಡ ಹೆಜ್ಜಾಜಿ ಇವರ ಸ್ಥಳ. ಅಲ್ಲಿಯ ಚೆನ್ನಕೇಶವ ಇವರ ಅಂಕಿತ. 'ಜಾಜೀಶ', ಜಾಜಿಕೇಶವ, ಜಾಜಿಶ್ರೀಶ, ಹೆಜ್ಜಾಜಿ ಚೆನ್ನಕೇಶವ, ಜಾಜೀಶ್ವರ, ಹೆಜ್ಜಾಜಿ ಕೇಶವ ಇತ್ಯಾದಿಯಾಗಿ ಅಂಕಿತವನ್ನು ಬಳಸಿರುವ ಸುಮಾರು ನೂರರ ಮೇಲೆ ಕೀರ್ತನೆಗಳು ದೊರೆತಿವೆ. 'ಕರ್ನಾಟಕ ಶ್ರೀವೈಷ್ಣವ ಮಠ'ಕ್ಕೆ ಸೇರಿದ ಈ ಕೀರ್ತನಕಾರರು ೨೦ನೇ ಶತಮಾನದವರು ಎಂದರೆ ಆಶ್ಚರ್ಯವಾದೀತು. ಕೀರ್ತನ ಸಾಹಿತ್ಯ ೨೦ನೇ ಶತಮಾನದಲ್ಲೂ ಜೀವಂತವಾಗಿ ಉಳಿದಿದೆ ಎಂಬುದನ್ನು ಈ ಕೀರ್ತನೆಗಳು ಸಾಬೀತುಪಡಿಸುತ್ತವೆ. ಇವರ ಜೀವನ ಚರಿತ್ರೆ ಬಹಳ ಕುತೂಹಲಕಾರಿಯಾದ ಅಂಶಗಳನ್ನು ಹೊರಚೆಲ್ಲುತ್ತದೆ. ಇವರ ಕೀರ್ತನೆಗಳಲ್ಲಿ ಕನಕ, ಪುರಂದರರಲ್ಲಿರುವಂತೆ ವೈವಿಧ್ಯತೆ ಇಲ್ಲದಿದ್ದರೂ ಕೀರ್ತನ ಪರಂಪರೆಗೆ ಒಂದು ಗಟ್ಟಿತನವನ್ನು ತಂದುಕೊಡುತ್ತದೆ. ತಮ್ಮ ಕೀರ್ತನೆಗಳನ್ನೆಲ್ಲ ಸೇರಿಸಿ ಒಂದು ಪುಸ್ತಕ ರೂಪದಲ್ಲಿ ಹೊರತರಲು ಪ್ರಯತ್ನಿಸಿ ಸೋತಿರುವುದನ್ನು ಮೊದಲ ಮಾತಿನಲ್ಲಿ ಟಿಪ್ಪಣಿಗಳಲ್ಲಿ ಬಹಳ ಸ್ಪಷ್ಟವಾಗಿ ಹೇಳಿಕೊಂಡಿದ್ದಾರೆ. 'ಭಕ್ತಬಂಧು'ವಿನಲ್ಲಿ ಹೊಸಕೆರೆ ಚಿದಂಬರಯ್ಯನವರು ಕೆಲವನ್ನು ಪ್ರಕಟಿಸಿದ್ದುದನ್ನೂ ಹೇಳುತ್ತಾರೆ. ಇವರ ಇನ್ನೂ ಕೆಲವು ಕೀರ್ತನೆಗಳು ಚೆದರಿಹೋಗಿದ್ದು ಈ ಅಂಕಿತವುಳ್ಳವು ಯಾರಿಗಾದರೂ ಕಂಡುಬಂದಲ್ಲಿ ನನ್ನ ಗಮನಕ್ಕೆ ತಂದರೆ ತುಂಬ ಉಪಕಾರವಾಗುತ್ತದೆ. ಮಾದರಿಗಾಗಿ ಕೆಲವು ಕೀರ್ತನೆಗಳನ್ನು ಇಲ್ಲಿ ಕೊಟ್ಟಿದೆ.

—ನಾ. ಗೀತಾಚಾರ್ಯ (ಸಂಗ್ರಾಹಕ)

ಪರಿ ಪರಿ ತಡೆಗಳ ತರಿದೋಡಿಸುತ
ಪೊರೆ ವಿಶ್ವಕ್ಸೇನಾಶ್ರಿತ ನಾನು ॥ ೨ ॥

ಬಿಡುಗಣ್ಣರ ಬೆಡಗಿನ ಒಡಲುಳ್ಳ
ಕುಡಿನೋಟದ ತಾವರೆಗಣ್ಣ
ಪಿಡಿದಿಹ ಶಂಖಚಕ್ರಗದಾಯುಧ
ಒಡೆಯ ಮುಕುಂದ ದ್ವಾರನಿಲಯನೆ ॥ ೩ ॥

ಬಯಕೆಯ ಪಡೆಯಲು ಬೊಮ್ಮ ಭವಸುರರು
ನಯದಿಂ ಮೊದಲಾರಾಧಿಪರು
ಭಯನಿವಾರಕ ಶುಭಫಲದಾಯಕ
ಜಯ ಜಾಜೀಶ್ವರ ಸೇನಾಪತಿಯೇ ॥ ೪ ॥

೨

## ಭಕ್ತನ ಬಯಕೆ

**ರಾಗ–ಶಂಕರಾಭರಣ** **ತಾಳ–ಛಾಪ**

ನಾ ಬೇಡುವೆನೋ ನಿನ್ನ ಸೌಭಾಗ್ಯಸಾಗರ
ಶ್ರೀ ಭೂನೀಳಾವರ ಭಾಗವತೋದ್ಧಾರ ॥ ಪ ॥

ಯಾವಾಗಲು ನಿನ್ನ ಬಳಿಯೊಳು ನಾನಿದ್ದು
ಭಾವಿಸಿ ಕುಶಲದ ಮಾತನಾಡಿ
ದೇವ ನಿನ್ನಯ ಪಾದಯುಗಳವನೊತ್ತುತೆ
ಸೇವಿಸಿ ಸುಖಿಪಂತೆ ಕರುಣಿಸು ಮುರಹರ ॥ ೧ ॥

ಮುಂಗಡೆ ಕುಣಿಕುಣಿದಾಡಿ ಸ್ತೋತ್ರವ ಮಾಡಿ
ಕಂಗಳೊಳಾನಂದಬಾಷ್ಪಗೂಡಿ
ಅಂಗವ ಮರೆತೆನ್ನ ಕಂಠ ಗದ್ಗದವಪ್ಪ
ಮಂಗಳಕರ ಭಕ್ತಿ ಕೃಪೆಮಾಡು ಶ್ರೀರಂಗ ॥ ೨ ॥

ಹೆಜ್ಜಾಜಿಯ ಚೆನ್ನಕೇಶವ ಮಾಧವ
ಹೆಜ್ಜೆ ಹೆಜ್ಜೆಗೆ ನಿನ್ನ ಸ್ಮರಣೆಯಿತ್ತು
ಸಜ್ಜುಗೊಳಿಸಿ ಎನ್ನ ಹೃದಯಪೀಠದಿ ಕೂಡೋ
ಅರ್ಜುನಸಾರಥಿ ಶ್ರೀ ಕೃಷ್ಣ ಪರಮಾತ್ಮ ॥ ೩ ॥

೩

## ನಿರ್ದಯನಾಗಬೇಡ

ರಾಗ–ಬೇಗಡೆ ತಾಳ–ರೂಪಕ

ಏಕೆ ದಯ ಬರದೋ ಶ್ರೀಕಾಂತ ನಿನಗೆ ॥ ಪ ॥

ಲೋಕನಾಯಕ ಎಷ್ಟು ಬೇಡಲೊ
ಜೋಕೆಯಿಂ ಸಾಕುವರದಾರೋ ॥ ಅ.ಪ ॥

ನಿನ್ನ ಮನವಿನ್ನೆಷ್ಟು ಕಠಿಣವೊ
ಮುನ್ನ ಮಾರುತಿಯೊಡನೆ ಮಸಗಿದೆ
ಎನ್ನೊಳಗೆ ನಿರ್ದಯೆಯೊಳಿರುವುದು
ಚೆನ್ನವಲ್ಲವೊ ಇನ್ನು ಚೆನ್ನಿಗ ॥ ೧ ॥

ಕಾಣೆನೇ ಸುಧನ್ವನಂ ಕೊಲೆ
ಜಾಣತನವನು ತೋರ್ದ ನಿನ್ನನು
ಬಾಣತ್ರಾಣವನಣುಗನೆನ್ನೊಳು
ಮಾಣು ಶಿವಧನುಭಂಗನಿಪುಣ ॥ ೨ ॥

ಮಕ್ಕಳನು ಹಡೆದವರು ಒಮ್ಮನ
ದಕ್ಕರೆಯ ಬೀರುತ್ತ ಸಲಹರೆ
ಮಕ್ಕಳಾಟಿಕೆಯಾಡುವೊಡೆ ನೀ
ದಕ್ಕುವರೆ ನಿನ್ನಡಿಯ ದಾಸರು ॥ ೩ ॥

ಸರ್ವಶಕ್ತನು ಆದರೇಂ ಫಲ
ಸರ್ವದಾ ಭಕ್ತರಿಗೆ ಕಷ್ಟವೆ
ನಿರ್ವಿಕಲ್ಪನೆ ಮರ್ಮವೇತಕೆ
ಧರ್ಮವ್ರತ ಪೊರೆ ಜಾಜಿಕೇಶವ ॥ ೪ ॥

೪

## ಹರಿನಾಮದಡಿಗೆ

ರಾಗ–ಆನಂದಭೈರವಿ ತಾಳ–ಆದಿ

ಹಸಿದು ನಾ ಬಳಲಲೇಕೆ ಈ ಸಮಯದಲ್ಲಿ
ಬಿಸಿಯೂಟ ಮಾಡುವೆನು ॥ ಪ ॥

ಹಸನಾದ ಶೇಷಶಯನ ನಾಮದಡಿಗೆಯು
ವಸುಮತಿ ಭವನಾಮ ರಸಾಯನವಿರೆ ॥ ಅ.ಪ ॥

ಹರಿಹರಿ ಪರಮಾನ್ನವು ದುರಿತಾರಿಶೌರಿ
ಕರಿಗಡುಬು ಗರುಗೊಬ್ಬಟ್ಟು
ನರಸಿಂಹನಾಮವಾಂಬೊಡೆ ಹೂರಿಗೆಗಳು
ಕರಿವರದ ರವೆಯುಂಡೆ ಸಜ್ಜಿಗೆಯಿರಲಿ ॥ ೧ ॥

ದುಷ್ಟಮರ್ದನನೆನ್ನುವ
ಇಷ್ಟವಾದ ಹುಳಿ ಸಾರು ಮೊಸರುಗಳು
ಕೃಷ್ಣವಾಸುದೇವ ಸಣ್ಣಕ್ಕಿಯನ್ನವು
ವಿಷ್ಣುಮಾಧವ ಬೆಣ್ಣೆಕಾಯ್ಸಿದ ತುಪ್ಪವಿರೆ ॥ ೨ ॥

ನಾರಾಯಣನೆನ್ನುವ ಸಾರವಾದ
ಹುಳಿಯನ್ನ ಮೊಸರನ್ನವು
ಸಾರಸಾಕ್ಷ ಶ್ರೀಶ ಕ್ಷೀರಸಕ್ಕರೆಯಿದ್ದು
ಮಾರಜನಕನೆಂಬ ಹಪ್ಪಳುಪ್ಪಿನಕಾಯಿರೆ ॥ ೩ ॥

ಪರಿಪರಿಯನ್ನಗಳು ಸರಿಯಾಗಿ ಭಕ್ಷ್ಯ
ಕರಿದೆಡೆಮಾಡಿರಲು ಅಂತು ಸವಿನೋಡಿ
ಮರೆಯದೆ ಭುಂಜಿಸಿ
ನಿರುತ ನಿಜಾನಂದ ಪಡೆಯದೆ ಬಿರಿದೇಳು ॥ ೪ ॥

ಗೋಪಾಲನೆಂದೆಂಬೊ ಸೀಪಿನ ಎಳೆ
ನೀರು ಪಾನಕವಿಹುವು
ತಾಪತ್ರಯಹರ ಹೆಜ್ಜಾಜಿ ಕೇಶವ
ಆಪದುದ್ಧಾರಕನೆಂಬಮೃತವುಣದೆ ॥ ೫ ॥

೫

ರಾಗ–ಸೌರಾಷ್ಟ್ರ ತಾಳ–ಆದಿ

ಬಡತನವೆನ್ನನು ಬಾಧಿಪುದ್ಯೆ ಹರಿ
ನುಡಿಯಲೆನಗೆ ನಾಲಿಗೆ ಬರದೀಪರಿ ॥ ಪ ॥
ಅಡಿಯೊಳು ಕೆಡೆದಿಹೆ ತಡಿಗಾಣದೆಯೆ
ಕಡಲಣುಗಿಗೊರೆದು ಕಡೆಹಾಯಿಸೊ ದೊರೆಯೆ ॥ ಪ ॥

ಮನುಜರು ಎನ್ನನು ಮಾನಿಸದಿರುವರು
ಮನೆಯೊಳು ಮಕ್ಕಳು ಮಾತನಾಲಿಸರು

ಅನುನಯದಿಂ ಸವಿ ವಚನವನುಸುರಲು
ವನಿತೆಯು ತಾಂ ಕೇಳದೆ ಕೋಪಿಪಳು ॥ ೧ ॥

ಬಂದ ಭಾಗವತರ ಪೂಜೆಯ ಮಾಡಲು
ಒಂದಾದರು ಸವಿವಸ್ತುಗಳಿಲ್ಲವೈ
ಸಂದಣಿ ಸೇರಲು ಮನಸು ಬಾರದು
ಕುಂದಹರಿಸು ಮನಪರಕೆಯ ತಂದು ॥ ೨ ॥

ದಾನ ಮಾಡಲು ದೀನತೆ ಬಿಡದು
ಕಾನನದಿರುತಿಹ ಕುರುಡನಂತಿಹೆನು
ಏನು ಮಾಡಲೊ ಎನ್ನ ಮನದೊಲುಮೆಯ ಬಲ್ಲ
ಮಾನ ಕುಚೇಲಪಾಲಕ ಸಿರಿನಲ್ಲ ॥ ೩ ॥

ಸಾಲದವರು ಗಂಟಲೊಳು ಕೋಲಿಡುವರೊ
ಶ್ರೀಲೋಲನೆ ನಾಂ ಮಾಡುವುದೇನೋ
ಲಾಲಿಸಿ ಹೆಜ್ಜಾಜಿ ಕೇಶವ ಪಾಲಿಸು
ಲೀಲೆಯಿಂ ನೀನ್ನೈಸಿರಿಯನೊಲಿಸು ॥ ೪ ॥

---

# ಕನ್ನಡ–ಕರ್ನಾಟಕ: ಬಿ.ಎಂ.ಶ್ರೀ. ದೃಷ್ಟಿ*

—ಟಿ. ಆರ್. ಮಹಾದೇವಯ್ಯ

ಕನ್ನಡಕ್ಕಾಗಿ ತಮ್ಮ ಜೀವಿತವನ್ನೇ ಮೀಸಲಿಟ್ಟು ತ್ರಿಕರಣಪೂರ್ವಕವಾಗಿ ದುಡಿದ ಆಚಾರ್ಯ ಬಿ. ಎಂ. ಶ್ರೀಕಂಠಯ್ಯನವರು ಕನ್ನಡನಾಡು–ನುಡಿಗಳ ಅನನ್ಯ ಭಕ್ತರು. ಕನ್ನಡವೇ ಅವರ ಜೀವ, ಕನ್ನಡವೇ ಅವರ ಬಾಳು, ಅದೇ ಅವರ ಸರ್ವಸ್ವ. ತಮ್ಮ ಪ್ರಾಮಾಣಿಕ ಹಾಗೂ ಸಮರ್ಪಣ ಸೇವೆಯಿಂದ ಕನ್ನಡಕ್ಕೊಂದು ನೆಲೆ–ಬೆಲೆಯನ್ನು ತಂದುಕೊಟ್ಟವರು ಅವರು. ಹೊಸಗನ್ನಡ ಸಾಹಿತ್ಯವನ್ನು ರೂಪಿಸಿ ಅದನ್ನು ಪ್ರಭಾವಪೂರ್ಣಶಕ್ತಿಯಾಗಿಸಿದ ಕೀರ್ತಿ ಅವರದು. ಅಂತೆಯೇ ಅವರು ಸರ್ವೋದಯ ಕನ್ನಡದ ಆಚಾರ್ಯಪುರುಷರೆನಿಸಿದರು.

ಕನ್ನಡನಾಡಿನ ಸ್ಥಿತಿಗತಿಗಳನ್ನು ಅವರಷ್ಟು ಚೆನ್ನಾಗಿ ಅರಿತವರು, ಆಸ್ಥೆಯಿಂದ ಅಭ್ಯಾಸ ಮಾಡಿದವರು ವಿರಳ. ಕನ್ನಡ ಭಾಷೆಯ ಗುಣ–ದೋಷಗಳನ್ನು ಅವರಷ್ಟು ಚೆನ್ನಾಗಿ ವಿಶ್ಲೇಷಿಸಿದವರು. ಕನ್ನಡಿಗರ ಗೊತ್ತು–ಗುರಿಗಳನ್ನು ನಿಷ್ಕರ್ಷಿಸಿದವರು ಅಪೂರ್ವ. ತಮಗನಿಸಿದ್ದನ್ನು ನಿರ್ಭಿಡೆಯಿಂದ, ಸ್ಫುಟವಾಗಿ, ಅಷ್ಟೇ ಆತ್ಮೀಯವಾಗಿ ಹೇಳುವ ಕಲೆ ಅವರಿಗೆ ಒಲಿದಿತ್ತು. ಅವರ ಸೂಕ್ಷ್ಮಾವಧಾನ, ಸುವಿವೇಕ, ದೂರ ದೃಷ್ಟಿಗಳಿಂದ ಮೂಡಿ ಬಂದ ವಿಚಾರಗಳು ಇಂದಿಗೂ ಹಳಸಿಲ್ಲ, ಬದಲು ಕಾಲೋಚಿತ ವೆನಿಸಿವೆ : ನಾಡು–ನುಡಿಯ ಆರಾಧಕರಿಗೆ ದಾರಿದೀಪವೆನಿಸಿವೆ.

ಬಿ. ಎಂ. ಶ್ರೀಯವರು ಜೀವಿಸಿದ್ದುದು ಒಂದು ಸಂಕ್ರಮಣ ಕಾಲದಲ್ಲಿ. ಅದು ಕನ್ನಡಿಗರು ಮಬ್ಬಿನಲ್ಲಿದ್ದ ಕಾಲ. ದೇಶಾಭಿಮಾನವಿಲ್ಲದೆ ಕನ್ನಡವು ಕನ್ನಡಿಗರಿಂದಲೇ ತಿರಸ್ಕರಿಸಲ್ಪಡುತ್ತಿದ್ದ ಕಾಲ. ಉಜ್ವಲ ದೇಶಭಾಷಾಭಿಮಾನಿಯಾದ ಶ್ರೀಯವರು ಆಗ ದೀಪಧಾರಿಯಾಗಿ ನಿಂತು ಕನ್ನಡಿಗರಲ್ಲಿ ಜಾಗೃತಿಯನ್ನುಂಟುಮಾಡುವ ದೀಕ್ಷೆ ಕೈಗೊಂಡರು. ಕನ್ನಡನಾಡಿನ ಮೂಲೆಮೂಲೆಯನ್ನೆಲ್ಲಾ ಸುತ್ತಾಡಿ, ಪ್ರಭಾವ ಪೂರ್ಣವಾದ ತಮ್ಮ ಸಿರಿಕಂಠದಿಂದ ಜನತೆಯನ್ನು ಎಚ್ಚರಿಸಿದರು. ಅವರು ನೋಡದ ಊರಿಲ್ಲ, ಸುತ್ತದ ಹಳ್ಳಿಯಿಲ್ಲ. ಹೋದಲ್ಲೆಲ್ಲಾ ಕನ್ನಡಿಗರ ಕನ್ನಡತನವನ್ನು ಬಡಿದೆಬ್ಬಿಸಿದರು. ಉತ್ಸಾಹಿಗಳಾದ ನಿಷ್ಠೆಯ ಯುವಕರನ್ನು ಸಂಘಟಿಸಿ, ಸೂಕ್ತ ಮಾರ್ಗದರ್ಶನ ನೀಡಿ ಕನ್ನಡ ರಕ್ಷೆಯ ಕಂಕಣ ಕಟ್ಟಿಬಿಟ್ಟರು. ನಾಡಿನಲ್ಲಿ ನವೋತ್ಸಾಹ. ನವಶಕ್ತಿ ಸಂಚರಿಸುವಂತೆ ಮಾಡಿದರು. ನಾಡ ಹೊರಗೂ ಕೂಡ ಕನ್ನಡಿಗರು ಇರುವ ಕಡೆ ಕನ್ನಡ ಸಂಘ-ಸಂಸ್ಥೆಗಳು ತಲೆಯೆತ್ತುವಂತೆ ಮಾಡಿದ ಶ್ರೇಯಸ್ಸು ಅವರದು. ಹೀಗಾಗಿ ಶ್ರೀ ಅವರು ಕರ್ನಾಟಕದ ಸಾಂಸ್ಕೃತಿಕ ಏಕೀಕರಣದ ಅಧ್ವರ್ಯು ಎನಿಸಿ ದ್ದಾರೆ. ಅಂತೆಯೇ ಅವರಿಗೆ 'ಕನ್ನಡದ ಕಣ್ವ'ರೆಂಬ ಕೀರ್ತಿ ಸಂದಿದೆ.

---

* ಆಕಾಶವಾಣಿಯ ಕೃಪೆಯಿಂದ.

ಶ್ರೀಯವರು ಭಾಷಾಂಧರಲ್ಲ. ತಾವೇ ಸ್ವತಃ ಆಂಗ್ಲಭಾಷಾ ಸಾಹಿತ್ಯವನ್ನು ಆಳವಾಗಿ ಅಭ್ಯಾಸಮಾಡಿ ಅದರಲ್ಲಿ ಘನ ವಿದ್ವಾಂಸರಾಗಿದ್ದರು. ಒಳ್ಳೆಯದು ಯಾವ ಕಡೆಯಿಂದಲಾದರೂ ಬರಲಿ. ಅದು ಯಾವ ಭಾಷೆಯ ಮೂಲಕವಾಗಿಯಾದರೂ ಬರಲಿ. ಅದನ್ನು ಕನ್ನಡಿಗರು ಹೀರಿ ಬೆಳೆಯಬೇಕು ; ತಮ್ಮ ವ್ಯಕ್ತಿತ್ವವನ್ನು ಆಳ ಹಾಗೂ ಬಹುಮುಖವಾಗಿಸಿಕೊಳ್ಳಬೇಕು ಎಂಬುದು ಅವರ ಆಸೆ. ಅಧ್ಯಯನ ಶೀಲರಾದ ಅವರು ಅನ್ಯತ್ರ ಒಳ್ಳಿತನ್ನು ಕಂಡು ಮೆಚ್ಚಿದಾಗ. ಅಂಥವನ್ನು ನಮ್ಮಲ್ಲೂ ತರಬೇಕೆಂಬ ಹೃದಯವಂತಿಕೆಯನ್ನು ಬೆಳೆಸಿಕೊಂಡಿದ್ದರು. ಅಂತೆಯೇ ಇಂಗ್ಲೀಷ್ ಮತ್ತು ಕನ್ನಡಗಳ ನಡುವೆ ಸ್ನೇಹಸೇತುವಾಗಿ ನಿಂತರು. ಇವಳ ಸೊಬಗನವಳು ತೊಟ್ಟುದನ್ನು ನೋಡಬಯಸಿದರು, ಅವಳ ತೊಡಿಗೆ ಇವಳಿಗಿಟ್ಟು ಹಾಡ ಬಯಸಿ ದರು. ಪರಿಣಾಮವಾಗಿ 'ಇಂಗ್ಲೀಷ್ ಗೀತಗಳು' ಎಂಬ ಆಚಾರ್ಯಕೃತಿ ಮೈದಾಳಿತು. ಹೀಗೆ ಹೊಸಗನ್ನಡ ಸಾಹಿತ್ಯಕ್ಕೆ ಹೊಸ ಪ್ರೇರಣೆ, ಹೊಸ ನೆಲಗಟ್ಟನ್ನು ಒದಗಿಸಿ ಹೊಸ ಪರಂಪರೆಯ ನಿರ್ಮಾಪಕರೆನಿಸಿದರು.

ಕನ್ನಡನಾಡು–ನುಡಿಗಳ ಬಗ್ಗೆ ಜನರಲ್ಲಿ ಅಭಿಮಾನ ಮೂಡಿಸಲು ಅವರು ಅನೇಕ ರಚನಾತ್ಮಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿದ್ದರು. 1. ತಮ್ಮ ದೇಶ, ತಮ್ಮ ಭಾಷೆಯ ಬಗ್ಗೆ ಅವರಲ್ಲಿ ತಿಳಿವಳಿಕೆ ಮೂಡಿಸಲು ಅತ್ಯವಶ್ಯಕವಾದ ಪುಸ್ತಕ ಗಳನ್ನು ಸರಳವಾಗಿ ಬರೆಸಿ ಎಲ್ಲರಿಗೂ ದೊರಕುವಂತೆ ಮಾಡಿದರು. ಅವರು ಸಿದ್ಧ ಗೊಳಿಸಿದ ಕನ್ನಡ ಕೈಪಿಡಿ, ಕನ್ನಡ ಬಾವುಟ ಮೊದಲಾದ ಗ್ರಂಥಗಳು ಆ ದಿಸೆಯಲ್ಲಿ ಮೈಲಿಗಲ್ಲುಗಳೇ. ಕಂಗೆಟ್ಟ ಕನ್ನಡಿಗರಿಗೆ 'ಕನ್ನಡ ಬಾವುಟ'ವನ್ನು ನೀಡಿ, ಅದರ ಮಹತ್ವವನ್ನು ಮನದಟ್ಟು ಮಾಡಿಕೊಟ್ಟು 'ಬೆಳಕು ಹರಿಯಿತು ಏಳಿ, ಇರುಳು ಕಳೆಯಿತು ಏಳಿ, ತಾಯ ಕರೆ ಕೇಳಿ' ಎಂದು ಕರೆಯಿತ್ತರು. 2. ಕನ್ನಡ ಭಾಷೆ ಯನ್ನು ಕಲಿಯುವಲ್ಲಿ ಉಂಟಾಗಬಹುದಾದ ತೊಡಕುಗಳನ್ನು ಗುರುತಿಸಿ, ಅವನ್ನು ಪರಿಹರಿಸುವ ಬಗ್ಗೆ ತೀವ್ರವಾಗಿ ಆಲೋಚಿಸಿದರು. ಎಳೆಯರಿಗೆ, ಅಚ್ಚುಕೂಟಗಳಿಗೆ ಸರಳವೂ, ಸರಸವೂ ಆಗುವಂಥ ಕನ್ನಡ ಲಿಪಿ ಸುಧಾರಣೆಯ ಬಗ್ಗೆಯೂ ಅವರು ಕೆಲಪ್ರಯೋಗಗಳನ್ನು ನಡೆಸಿದರು. ಕನ್ನಡವನ್ನು ಕಲಿಸುವಾಗ ಹೊಸ ಬೋಧನ ಕ್ರಮವನ್ನು ಹೊಸ ಕಾಲದ ದೃಷ್ಟಿ–ಧ್ಯೇಯಗಳಿಗನುಸಾರವಾಗಿ ತರಲು ಶ್ರಮಿಸಿದರು. ಭಾಷೆಯನ್ನು ಜನಾದರಣೀಯಗೊಳಿಸುವುದೇ ಆವರ ಉದ್ದೇಶ. 3. ಶ್ರೀಯವರು ಪ್ರಸಿದ್ಧ ವಾಗ್ಮಿಗಳಾಗಿದ್ದರು. ಅವರ ಮಾತು ಜನರ ಹೃದಯದ ತಂತಿಯನ್ನೇ ಮೀಟುತ್ತಿತ್ತು. ಅವರ ಕಂಠಶ್ರೀಯಿಂದ ಹೊಮ್ಮುತ್ತಿದ್ದ ಅಸ್ಖಲಿತ ವಾಗ್ಝರಿ ಕೇಳುವವರ ಕ್ಲೈಬ್ಯ, ಅಜ್ಞಾನ, ಜಡತೆಗಳನ್ನು ಕೊಚ್ಚಿಹಾಕಿ ತಿಳಿವಿನ ಬೆಳಕನ್ನು, ಸ್ವಾಭಿಮಾನದ ಕೆಚ್ಚು–ನೆಚ್ಚುಗಳನ್ನು ಮೂಡಿಸುತ್ತಿತ್ತು. ಹೀಗೆ ಶ್ರೀಯವರು ಸಂದೇಶವಾಹಕಗಳಾದ ನಾಲಗೆ–ಲೇಖಣಿಗಳೆರಡನ್ನೂ ನಾಡಹಿತಕ್ಕಾಗಿ ಸಾರ್ಥಕವಾಗಿ ದುಡಿಸಿಕೊಂಡರು. 1928ರಲ್ಲಿ ಕಲ್ಬುರ್ಗಿಯಲ್ಲಿ ನಡೆದ 14ನೆಯ ಸಾಹಿತ್ಯ

ಸಮ್ಮೇಳನದ ಅಧ್ಯಕ್ಷ ಪೀಠದಿಂದ ಅವರು ನೀಡಿದ ಸಂದೇಶವನ್ನು ಯಾರೂ, ಎಂದಿಗೂ ಮರೆಯುವಂತೆಯೇ ಇಲ್ಲ.

ಶ್ರೀಯವರ ಶತಮಾನೋತ್ಸವವನ್ನು ಆಚರಿಸಲು ನಾಡು ಸಿದ್ಧವಾಗುತ್ತಿರುವ ಈ ಸಮಯದಲ್ಲಿ ನಾಡು–ನುಡಿಗಳ ಬಗೆಗಿನ ಅವರ ನವನವೋನ್ಮೇಶಶಾಲಿನಿಯಾದ ಅವರ ವಿಚಾರಗಳನ್ನು ನೆನೆಯುವುದು ಉಚಿತವೇ ಸರಿ.

'ಬಳಸಿ ಬಂದೆನು ಸುತ್ತ ಕನ್ನಡದ ನಾಡುಗಳ ಸಿರಿಯ ನೋಡುತ್ತ
ತಾಯಡಿಯ ಹುಡಿಯ ತಲೆಗಾನುತ್ತ ಹರಕೆಯ ಪವಿತ್ರ ಯಾತ್ರೆಯಲಿ.

ಏನು ಚೆಲುವಿನ ನಾಡು ಚೆಲುವು ಚೆಲ್ಲುವ ನಾಡು ಕನ್ನಡದ ನಾಡು
ಕಾವೇರಿಯಿಂದಮಾ ಗೋದಾವರಿಯವರೆಗೆ ಚಾಚಿರುವ ನಾಡು
ಬಳಸಿದೆನು, ಸುತ್ತಿದೆನು, ಕಣ್ದಣಿಯೆ ನೋಡಿದೆನು, ಕುಣಿದು ಹಾಡಿದೆನು.'

ಇವು ಶ್ರೀಯವರ 'ಕನ್ನಡ ತಾಯ ನೋಟ' ಕವನದ ಸಾಲುಗಳು.

ಕನ್ನಡನಾಡಿನ ದಿವ್ಯವೂ ಭವ್ಯವೂ ಆದ ಇತಿಹಾಸವನ್ನು ಅರಿತು, ಆದರ ಸಾಹಿತ್ಯವನ್ನು ಅಭ್ಯಾಸ ಮಾಡಿದ್ದೂ ಅಲ್ಲದೆ ನಾಡಿನಲ್ಲೆಲ್ಲಾ ಸುತ್ತಾಡಿ, ಜನರ ನೇರ ಸಂಪರ್ಕ ಹೊಂದಿ ಪ್ರತ್ಯಕ್ಷ ಅನುಭವ ಪಡೆದ ಶ್ರೀಯವರಿಗೆ ಕರ್ನಾಟಕದ ಸ್ಪಷ್ಟಚಿತ್ರ ಮೂಡಿತ್ತು. ಆ ಪವಿತ್ರ ನೆಲದಲ್ಲಿ ಆಗಿಹೋದ ವೀರರ, ಧರ್ಮವೀರರ, ತ್ಯಾಗಿಗಳ, ಕಲಾವಿದರ, ಕವಿಗಳ ಪರಂಪರೆಯನ್ನು ಕಂಡು ಹೆಮ್ಮೆಪಟ್ಟರು. 'ಕನ್ನಡನಾಡು ಚಿಕ್ಕದಿರಬಹುದು. ನಮ್ಮ ಕನ್ನಡಿಗರು ಸ್ವಲ್ಪ ಜನವಿರಬಹುದು. ಜರಗವನ್ನು ಚೆಲ್ಲಿದಂತೆ ಚೆದರಿಹೋಗಿರಬಹುದು. ಆದರೆ ಕರ್ನಾಟಕದ ಪೂರ್ವಚರಿತ್ರೆಯನ್ನು, ಪ್ರಕೃತ ಸಾಹಸವನ್ನು ನೆನೆಸಿಕೊಂಡರೆ ನಮ್ಮ ಪುರೋಭಿವೃದ್ಧಿಯಲ್ಲಿ ಯಾವ ಸಂದೇಹಕ್ಕೂ ಕಾರಣವಿಲ್ಲ' ಎಂದುಕೊಂಡರು. ಅದರಂತೆಯೇ 'ಬೆಳೆಯೇನೋ ಬೇಕಾದಹಾಗಿದೆ. ಆದರೆ ಕೊಯ್ಯುವವರು ಕಡಿಮೆ' ಎಂದು ನೊಂದುಕೊಂಡರು.

ಆದರೆ ಕ್ರಮೇಣ ಕನ್ನಡಿಗರು ಪರಭಾಷೆ, ಪರಸಂಸ್ಕೃತಿಗಳಿಗೆ ಮಾರುಹೋಗಿ ತಮ್ಮತನವನ್ನು ಕಳೆದುಕೊಳ್ಳತೊಡಗಿದರು. ಸ್ವಾಭಿಮಾನಶೂನ್ಯರಾದ ಮಕ್ಕಳಿಂದ ಕನ್ನಡನಾಡ ತಾಯಿ ಬಡವಾಗುವಂತಾಯಿತು. ಇದನ್ನು ಕಂಡ ಶ್ರೀಯವರು ಬಹಳ ನೊಂದುಕೊಂಡರು. ಅವರ ಅಂದಿನ ಮನಸ್ಥಿತಿ ಅವರ ಕವನವೊಂದರಲ್ಲಿ ಮೂಡಿದೆ. ಅದರಲ್ಲಿ ಕವಿ ನಾಡದೇವಿಯೊಡನೆ ನಡೆಸಿದ ಒಂದು ಕಾಲ್ಪನಿಕ ಸಂದರ್ಶನವಿದೆ.

ಕನ್ನಡತಾಯಿ ದೇಸಿಗಳಂತೆ ಕಂಗಾಲಾಗಿ ಒಂದು ಕಡೆ ಕೂತಿದ್ದಾಳೆ. ಅಳಲಿನಾಳದಲ್ಲಿ ಅದ್ದಿ ಕುಳಿತ ತೇಜಸ್ವಿಯಾದ ಆ ಹಿರಿಯ ಮುತ್ತೈದೆಯನ್ನು ಕವಿ ಪ್ರಶ್ನಿಸುತ್ತಾನೆ :

"ಯಾರವ್ವ ನೀ ತಾಯೆ ? ಏತಕಿಂತೊಬ್ಬಳೇ ಕುಳಿತೆ ಕಾಡಿನಲಿ ?
ಏಕೆ ಮೊಗ ಬಾಡಿಹುದು, ಕಂದಿಹುದು, ನೊಂದಿಹುದು, ಕಾಂತಿಗುಂದಿಹುದು ?"

ಅದಕ್ಕೆ ಆಕೆ ತನ್ನ ಗೋಳನ್ನು ಹೀಗೆ ತೋಡಿಕೊಳ್ಳುತ್ತಾಳೆ :—

"ಕೇಳಣ್ಣ. ನಾನೊಬ್ಬ ಹಳೆಯ ಮುತ್ತೈದೆ—ಹಿರಿದಾಗಿ ಬಾಳಿದವಳೊಮ್ಮೆ.
ಈಗ ಬಡತನ. ಬಡವೆ.  ಬಡವಾದೆ. ಬಡವಾದ ಮಕ್ಕಳನು ನೋಡಿ.
ಹೊಸಹಮ್ಮು ಹಮ್ಮುತ್ತ ಎಲ್ಲರೂ. ನನ್ನಕ್ಕತಂಗಿಯರು ಚಿಗುರಿ
ಎಲ್ಲರೂ ಚೆಲುವಾದರೆಲ್ಲರೂ ಚಿನ್ನವಾದರು. ನೋಡು ಹೇರೊಕ್ಕಲಾಗಿ ಹಾಡುವರು.

ಅವರ ಮಕ್ಕಳು ಬೆಳೆದು ಕಳೆಗೂಡಿ ಮನೆಬೆಳಗಿ ಹಬ್ಬ ಮಾಡುವರು
ತಾವ್ ಮೊದಲು ಬದುಕಿ. ತಾಯ್ ಮೊದಲು ಬದುಕಿ
ಪರರ ಹೊರೆಗಳನಿಳಿಸಿ. ಪರರ ಸೆರೆಗಳ ಬಿಡಿಸಿ ಕೈಯನ್ನು ನೀಡುವರು.
ಆ ಸಯ್ಪು, ಆ ಪುಣ್ಯ ನನಗಿಲ್ಲ : ನನ್ನ ಮಕ್ಕಳಿಗಿಲ್ಲ ಹಬ್ಬ.

ಎಲ್ಲರೂ ಬಾಳುವೆಡೆ ನಮಗೆ ಸಾವೆ ?
ಎಲ್ಲರೂ ನಲಿವೆಡೆ ನಮಗೆ ನೋವೆ ?

ಏನು ಕವಿಯಿತೊ ಮಂಕು ಮಕ್ಕಳಿಗೆ ! ಯಾರೆಸಗಿದರೊ ಬೂದಿ. ಕಾಣೆ !
ನನ್ನನೊಲ್ಲರು ಮಕ್ಕಳೇ ! ತಾವ್ ಬಾಳಿ. ತಾಯ ಬಾಳಿಸರು.
ಪರರ ನುಡಿ. ಪರರ ನಡೆ, ಪರರ ಕೂಗೇ ಕೂಗು. ಪರರದೇ ಹೆಮ್ಮೆ !
ನನ್ನ ಮನೆ ಹಾಳು ! ನನ್ನ ನುಡಿ ಬೀಳು !

ಕನ್ನಡ ತಾಯಿಯ ಹೃದಯ ಹಿಂಡುವ ಈ ಮಾತ ಕೇಳಿದ ಕವಿ ಆಕೆಯನ್ನು ಹೀಗೆ ಸ್ವಾಂತನಗೊಳಿಸುತ್ತಾರೆ :

"ಏಕಮ್ಮ ಇನಿಸೊಂದು ಕೊರಗು ? ಬೇಡಮ್ಮ ಮಕ್ಕಳಲಿ ಇನಿಸೊಂದು ಕಡು ಮುನಿಸು.
ಬಾರಮ್ಮ ಹರಸು. ನಿನ್ನ ನಾಡಿನೊಳಿದೆಕೊ ಬೆಳಕು ಮೂಡಿಹುದು—ಜೀವ ಕೂಡಿಹುದು.
ನಿನ್ನ ಮಕ್ಕಳು ನಿದ್ದೆಗಳೆದೆದ್ದು ಸಿಂಹದಂತೇಳುತ್ತ ಮೊಳಗಿ
ಕಣ್ಕಳಿದು ಪಂಪ ನೃಪತುಂಗರಾ ಮಾತುಗಳ ದಿಟವೆನಿಸುತಿಹರು.
ಸೆರೆಯನೊಕ್ಕಡೆಗೊಗೆದು. ಬಿಡುಗಡೆಯ ಕೈಕೊಂಡು. ಹಳನೆನಪ ನೆನೆದು
ಹೊಸ ಕಾಣ್ಕೆಗಳ ಕಂಡು. ಸಾಮ್ರಾಜ್ಯಗಳ ಮತ್ತೆ ಕಟ್ಟುತಿಹರು.
ನಿನ್ನ ನಾಡೊಂದಾಗಿ. ನಿನ್ನ ನುಡಿ ಮೇಲಾಗಿ. ಮನೆ ಮಕ್ಕಳೆಲ್ಲ ಹೇರೊಕ್ಕಲಾಗಿ ಹಾಡುವರು.
ತಾಯ್ ಬದುಕಿ. ತಾವ್ ಬದುಕಿ, ಪರರ ಬದುಕಿಪರು !"

ಈ ನಾಟಕೀಯ. ಆದರೆ ಅರ್ಥಪೂರ್ಣ ದೃಶ್ಯದಲ್ಲಿ ನಾಡ ಸಮಸ್ಯೆಯ ಸ್ಪಷ್ಟ ಚಿತ್ರ ಚೆನ್ನಾಗಿ ಮೂಡಿದೆಯಲ್ಲವೆ ?

ಇನ್ನು ಕನ್ನಡದ ಬಗೆಗೆ ಅವರ ದೃಷ್ಟಿ ತುಂಬಾ ಹಾರ್ದಿಕ ಹಾಗೂ ಉದಾತ್ತ. ನಮ್ಮ ಸುತ್ತಮುತ್ತ ಹಲವು ಭಾಷೆಗಳು ಬಳಕೆಯಲ್ಲಿವೆ. ಮಾತೃಭಾಷೆ, ದೇಶಭಾಷೆ, ರಾಷ್ಟ್ರಭಾಷೆ, ದೇವಭಾಷೆ – ಈ ಭಾಷೆಗಳ ಹೋರಾಟದಲ್ಲಿ ಕನ್ನಡಿಗ ಯಾವ ಭಾಷೆಯನ್ನರಿತು ಕೃತಾರ್ಥನಾಗಬೇಕು ? ಈ ವಿಚಾರದಲ್ಲಿ ಶ್ರೀಯವರು ಸಾಕಷ್ಟು ಚಿಂತನೆ ಮಾಡಿ ಹೀಗೆ ತೀರ್ಮಾನಕ್ಕೆ ಬಂದಿದ್ದಾರೆ : "ಕನ್ನಡಿಗರಿಗೆ ಕನ್ನಡವೇ ಗತಿ ಅನ್ಯಥಾ ಶರಣಂ ನಾಸ್ತಿ. ಸಂಸ್ಕೃತವಲ್ಲ, ಇಂಗ್ಲೀಷ್ ಅಲ್ಲ, ಹಿಂದಿಯಲ್ಲ : ಕನ್ನಡ." ಅವರು ಮುಂದುವರಿದು ಹೇಳಿದರು : "ಈ ಕನ್ನಡ ಸಾವಿರಾರು ವರ್ಷಗಳಿಂದಲೂ ಬೆಳೆದು ಬಂದಿರುವ ಭಾಷೆ. ಒಂದು ಸಾಹಿತ್ಯದ ಬಗ್ಗೆಯಾಗಲಿ, ಚರಿತ್ರೆಯ ವಿಷಯವೇ ಆಗಲಿ ಅಥವಾ ಸಂಸ್ಕೃತಿ, ಧರ್ಮ, ಕಲೆ ಮುಂತಾದ ಮತ್ತಾವ ವಿಷಯದಲ್ಲೇ ಆಗಲಿ ಇತರ ಭಾಷೆಗಳವರು ಎಷ್ಟು ಅಭಿಮಾನ ಆಸಕ್ತಿಗಳನ್ನು ತೋರಿಸಬಹುದೋ ಅಷ್ಟೇ ಅಭಿಮಾನ ಆಸಕ್ತಿಗಳನ್ನು ಕನ್ನಡಿಗರು ಕನ್ನಡ ಭಾಷೆಯ ವಿಷಯದಲ್ಲಿ ತೋರಿಸುವುದಕ್ಕೆ ಅವಕಾಶವಿದೆಯೆಂದು ನಾನು ನಂಬಿದ್ದೇನೆ. ಕನ್ನಡ ಭಾಷೆಗೆ ಯಾವ ರೀತಿಯಿಂದಲೂ ಅಪಾಯ ತಟ್ಟದ ಹಾಗೆ ಕನ್ನಡನಾಡಿನಲ್ಲಿ ಅದಕ್ಕೆ ಪ್ರಧಾನ ಸ್ಥಾನ ಕೊಟ್ಟು ಭಗವಂತನು ನಮಗೆ ಕೊಟ್ಟಿರತಕ್ಕ ಬಲವನ್ನು–ಧನಬಲ, ಬುದ್ಧಿಬಲಗಳೆರಡನ್ನೂ–ಅದಕ್ಕಾಗಿ ವಿನಿಯೋಗಿಸುವುದು ಕನ್ನಡಿಗರ ಕರ್ತವ್ಯವೆಂದು ಭಾವಿಸಿದ್ದೇನೆ. ಇದನ್ನು ಪ್ರತಿಯೊಬ್ಬರೂ ವಿಚಾರ ಮಾಡಿ ಒಂದು ನೆಲೆಗೆ ಬರಬೇಕಾಗಿದೆ."

'ಕನ್ನಡದಲ್ಲಿ ಎಂತಹ ಸಾಮರ್ಥ್ಯವಿದೆಯೆಂದರೆ ತನ್ನ ಬಳಿ ಸಂದ ಯಾವುದೇ ಭಾಷೆಯ ಸಾರವನ್ನು ಹೀರಿ ಅದು ಬೆಳೆಯುತ್ತಾ ಬಂದಿದೆ. ಅನ್ಯ ಭಾಷೆಯ ಪ್ರಭಾವದಿಂದ ಅದು ಕುಗ್ಗಲಿಲ್ಲ. ಬದಲು ಅದರ ಕೆಚ್ಚು ಗಟ್ಟಿಗೊಳ್ಳುತ್ತಲಿದೆ. ಸಹಸ್ರಾರು ವರ್ಷಗಳಿಂದಲೂ ಅದು ತನ್ನ ವೈಶಿಷ್ಟ್ಯವನ್ನು ಉಳಿಸಿಕೊಂಡು ಬರುತ್ತಿದೆ. ಆದರೆ ಈಗ ಆ ಭಾಷೆಗೆ ಗಂಡಾಂತರ ಬಂದಂತೆ ಕಾಣುತ್ತದೆ. ಕನ್ನಡ ಸಾಹಿತ್ಯಕ್ಕೆ ಹಿಂದೆ ಬಲವಾದ ಆಶ್ರಯವಿತ್ತು. ರಾಜರು, ಮಂತ್ರಿಗಳು, ಸೇನಾಪತಿಗಳು, ಮಠಾಧಿಪತಿಗಳು, ಶ್ರೀಮಂತರು ದೇಶಭಾಷೆಯನ್ನು ಉದ್ಧರಿಸಲೆಂದು ಸಾಹಿತ್ಯಸೃಷ್ಟಿಗೆ ಎದೆಗೊಟ್ಟು ನಿಂತಿದ್ದರು. ಹೀಗಾಗಿ ಅಂದು ಕನ್ನಡ ಉಚ್ಛ್ರಾಯಸ್ಥಿತಿಗೇರಿತ್ತು. ಈಗ ಅದು ಅನೇಕ ಕಾರಣಗಳಿಂದ ಅವನತಸ್ಥಿತಿಗೆ ಬಂದಿದೆ, ಕುಗ್ಗಿಹೋಗಿದೆ, ಅದು ಬಲ ಕಳೆದುಕೊಳ್ಳುತ್ತಿದೆ. ಅದನ್ನಾಡುವ ಜನರಲ್ಲಿ ಹಲವರಿಗೆ ಅದರಲ್ಲಿ ಪ್ರೇಮವಿಲ್ಲ. ಅದಕ್ಕೆ ಹಾನಿ ತಟ್ಟದಂತೆ ಕಾಪಾಡಿಕೊಳ್ಳುವ ಉತ್ಸಾಹವಿಲ್ಲ. ಅವರ ಪ್ರೇಮ, ಅವರ ಉತ್ಸಾಹ ಮತ್ತೆಲ್ಲಿಯೋ ಹೋಗಿದೆ ! ಹಿಂದೆ ರಾಜಾಶ್ರಯವಿದ್ದಂತೆ ಈಗ ಜನಾಶ್ರಯ ದೊರಕಿ ಅದು ವೃದ್ಧಿಯಾಗಬೇಕಾಗಿದೆ.'

ಕನ್ನಡಿಗರು ಬೇರೆ ಬೇರೆ ಭಾಷೆಗಳನ್ನು ಕಲಿಯುವುದು ತಪ್ಪೆಂದು ಶ್ರೀಯವರಿಗನಿಸಲಿಲ್ಲ. ಆದರೆ ತನ್ನ ಭಾಷೆಯನ್ನು ಬೀಳಾಗಿಸಿ ಪರಭಾಷಾ ವ್ಯಾಮೋಹವನ್ನು ಹಚ್ಚಿಕೊಳ್ಳುವುದು ಪಾಪ ಎಂದರು. 'ನಮ್ಮ ಮನೆಯಲ್ಲಿ ತಾಯಿಯನ್ನು ಉಪವಾಸ

ವಿರಿಸಿ ಊರ ಉತ್ಸವಕ್ಕೆ ಹೋಗುವುದೆ? ಪ್ರಪಂಚದ ಉತ್ಸವದಲ್ಲಿ ಮನೆಯನ್ನು ಬರಿದು ಮಾಡುವುದೆ?' ಎಂದು ಪ್ರಶ್ನಿಸಿದ ಅವರು ಕೊನೆಗೆ ಹೀಗಂದಿದ್ದಾರೆ: 'ಕನ್ನಡಮಾತೆಯ ಮೂಲಕ ಭಾರತಮಾತೆಯನ್ನು ಸೇವಿಸೋಣ. ಕನ್ನಡಮಾತೆ ಉದ್ಧಾರವಾದರೆ ಭಾರತಮಾತೆಯೂ ಉದ್ಧಾರವಾಗುತ್ತಾಳೆ.'

ಶ್ರೀಯವರಿಗೆ ಕನ್ನಡದ ಬಗ್ಗೆ ವಿಶಾಲಹೃದಯದ ಪ್ರೇಮವಿದ್ದರೂ ಅವರಲ್ಲಿ ಸಂಕುಚಿತ ದೃಷ್ಟಿಯಿರಲಿಲ್ಲ. ಅವರದು ಉದಾರವಾದ ನಿಲವು. ಕನ್ನಡವು ನಮ್ಮ ಜನತೆಯ ಆವಶ್ಯಕತೆಗಳಿಗೆಲ್ಲ ಒದಗಿ ಅವರ ಜೀವಾಳವಾಗಬೇಕು. ಅವರ ಆತ್ಮ ವಿಕಾಸಕ್ಕೆ ಆಧಾರವಾಗಬೇಕು. ಕನ್ನಡ ಹೀಗೆ ನಿರಂತರ ಅಭಿವೃದ್ಧಿ ಪಡೆಯಬೇಕೆಂಬುದೇ ಅವರ ಅಪೇಕ್ಷೆ.

ಶ್ರೀಯವರ ಆಶಯವಿಷ್ಟೆ: 'ಪ್ರಪಂಚದ ನಾಗರಿಕ ಜನಾಂಗಗಳಲ್ಲಿ ಕನ್ನಡಿಗರು ಅಮರರಾಗಿ ಉಳಿಯಬೇಕು. ಉತ್ತಮ ಬಾಳ ಬಾಳಬೇಕು. ನಮ್ಮ ನಾಡು ಉಜ್ವಲವಾಗಿ ಬೆಳಗಿ ಸೌಖ್ಯದ ನೆಲೆವೀಡಾಗಬೇಕು. ನಮ್ಮ ನಲ್ನುಡಿ ಚಿನ್ನದ ಸೊಂಪು ತಳೆಯಬೇಕು. ನಮ್ಮ ನಾಡು ಅಕ್ಕಪಕ್ಕದ ಮುಂದುವರಿದ ಪ್ರಾಂತದವರಂತೆ ತಲೆಯೆತ್ತಿ ಮೆರೆಯುವುದಕ್ಕೆ, ನಮ್ಮ ಪ್ರಾಂತದ ಕೀರ್ತಿ ದಿಗಂತದವರೆಗೆ ಹರಡಲು ನಮ್ಮ ಭಾಷೆಯ ಸೊಂಪು. ಸೌಂದರ್ಯ ಗಾಂಭೀರ್ಯಗಳು ಉನ್ನತಮಟ್ಟಕ್ಕೇರಲು ಕನ್ನಡಿಗರೆಲ್ಲ ಸುಸಂಘಟಿತರಾಗಬೇಕು. ನಮ್ಮ ನಾಡು ನುಡಿಗಳ ಸೇವೆಗೆ ನಿಂತಾಗ ಜಾತಿಯ ಸಂಕುಚಿತತೆ ತೊಲಗಬೇಕು. ಒಂದು ಭಾಷೆಯನ್ನು ಮಾತನಾಡುವವರೆಲ್ಲ ಒಂದು ಜಾತಿ. ಕನ್ನಡಿಗರಲ್ಲಿ ಈ ಭಾವನೆ ಸರಿಯಾಗಿ ಮೂಡಿಲ್ಲ. ಗಡಿನಾಡಿನಲ್ಲಿ ವಾಸಿಸುವ ಕನ್ನಡಿಗರ ಸ್ಥಿತಿ ಶೋಚನೀಯವಾಗಿದೆ. ಅವರು ಅಧಿಕ ಸಂಖ್ಯಾತರಿದ್ದರೂ ಅವರ ಮಕ್ಕಳಿಗೆ ಮನೆಮಾತಿನಲ್ಲಿ ಶಿಕ್ಷಣ ಸಿಕ್ಕುತ್ತಿಲ್ಲ. ಇದಕ್ಕೆಲ್ಲಾ ಕಾರಣ ನಾವೇ. ನಮ್ಮ ನಿರಭಿಮಾನ. ಇನ್ನಾದರೂ ಎಚ್ಚೆತ್ತುಕೊಳ್ಳೋಣ.'

ಹೀಗೆ ನಾಡಿನ ನಾಡಿಯನ್ನೇ ಹಿಡಿದು ಜನಮನದಲ್ಲಿ ಕನ್ನಡದ ಕಿಚ್ಚನ್ನು ಹತ್ತಿಸಿ, ನಚ್ಚು ಮೂಡಿಸಿದ ಶ್ರೀಯವರು ಸಮಸ್ತ ಕನ್ನಡಿಗರು ತಮ್ಮೊಡನೆ ಒಕ್ಕೊರಲಿನಿಂದ ದನಿಗೂಡಿಸ ಹೇಳಿದ್ದು ಇದು:

'ಏಳ್ ಕನ್ನಡತಾಯ್, ಬಾಳ್ ಕನ್ನಡ ತಾಯ್
ಆಳ್ ಕನ್ನಡತಾಯ್ ಕನ್ನಡಿಗರೊಡತಿ ಓ ರಾಜೇಶ್ವರೀ.'

ಅಂದು ಅವರು ಉಚ್ಚರಿಸಿದ ಈ ತಾರಕಮಂತ್ರವನ್ನು ನಾವೂ ಪುನರುಚ್ಚರಿಸೋಣ:

ಸಿರಿಗನ್ನಡಂ ಗೆಲ್ಗೆ, ಹಿರಿಗನ್ನಡಂ ಗೆಲ್ಗೆ, ಬಾಳ್ಗೆ,
ಕನ್ನಡತಾಯ್ ಗೆಲ್ಗೆ, ಬಾಳ್ಗೆ.

# ಸಿಂಧು ಲಿಪಿ*

**ಡಾ॥ ಎಸ್. ಆರ್. ರಾವ್**

### ಸಿಂಧೂ ನಾಗರಿಕತೆಯ ವೈಶಿಷ್ಟ್ಯ

ಪ್ರಪಂಚದ ಅತ್ಯಂತ ಪ್ರಾಚೀನ ನಾಗರಿಕತೆಗಳಲ್ಲೊಂದಾದ ಸಿಂಧು ನಾಗರಿಕತೆಯು ವೈಜ್ಞಾನಿಕ ಮತ್ತು ತಾಂತ್ರಿಕ ಕ್ಷೇತ್ರಗಳಲ್ಲಲ್ಲದೆ ನೈತಿಕ ಹಾಗೂ ಆಧ್ಯಾತ್ಮಿಕ ಕ್ಷೇತ್ರಗಳಲ್ಲಿಯೂ ಸಮಕಾಲೀನ ನಾಗರಿಕತೆಗಳಿಗಿಂತ ಮುಂದುವರಿದಿತ್ತೆಂದು ಹೇಳಬಹುದು. ಸಿಂಧುಕಣಿವೆಯಲ್ಲಿರುವ ಹರಪ್ಪ ಮಹೆಂಜೊದಾರೋ ನಗರಗಳಲ್ಲಿ 1921 ರಿಂದ 1932ರ ವರೆಗೆ ನಡೆಯಿಸಿದ ಉತ್ಖನನದಿಂದ ಈ ನಾಗರಿಕತೆಯ ಶಿಸ್ತು. ನಗರ ನೈರ್ಮಲ್ಯ. ನಗರ ರಚನಾ ಪರಿ. ಅಲ್ಲಿ ಜಾರಿಯಲ್ಲಿದ್ದ ತೂಕ ಹಾಗೂ ಅಳತೆಗಳ ಪ್ರಮಾಣ ಮತ್ತು ನಿವಾಸಿಗಳ ಮತ ಮುಂತಾದವುಗಳ ವಿಷಯ ಬೆಳಕಿಗೆ ಬಂದಿದೆ. ಈ ನಾಗರಿಕತೆಗೆ ಹರಪ್ಪ ಸಂಸ್ಕೃತಿಯೆಂದೂ ಹೇಳಲಾಗುತ್ತದೆ. 1947 ರಲ್ಲಿ ನಡೆದ ಭಾರತದ ವಿಭಜನಾನಂತರ ಸಿಂಧೂ ನಾಗರಿಕತೆಯ ಪಟ್ಟಣಗಳೆಲ್ಲಾ ಪಾಕಿಸ್ತಾನಕ್ಕೆ ಸೇರಿದುದರಿಂದ ಭಾರತದಲ್ಲಿ ಈ ನಾಗರಿಕತೆಯ ಅವಶೇಷಗಳನ್ನು ಗುರುತಿಸಲು ಭಾರತೀಯ ಪ್ರಾಚ್ಯ ಸಂಶೋಧನಾ ಸರ್ವೇಕ್ಷಣದ ಪರವಾಗಿ ನಾನು ಗುಜರಾತಿನಲ್ಲಿರುವ ರಂಗಪುರಪೇಟ ಸ್ಥಳದಲ್ಲಿ ಉತ್ಖನನವನ್ನು 1953–54ರಲ್ಲಿ ಜರುಗಿಸಿದೆ. ಅಲ್ಲಿ ಹರಪ್ಪ ಸಂಸ್ಕೃತಿಯ ಅವಶೇಷಗಳು ಕಂಡುಬಂದುದರಿಂದ 1954 ರಲ್ಲಿ ಗುಜರಾತ್ ಪ್ರಾಂತ್ಯದಲ್ಲೆಲ್ಲಾ ಸಂಶೋಧನೆ ನಡೆಯಿಸಿ 50 ಕಿಂತ ಹೆಚ್ಚು ಹರಪ್ಪ ಸಂಸ್ಕೃತಿಯ ವಸತಿಗಳನ್ನು ಗುರುತಿಸಲಾಯಿತು. ಅವುಗಳಲ್ಲಿ ಅತಿ ಮುಖ್ಯವಾದುದು ಲೋಥಲ್ ಎಂಬ ರೇವುಪಟ್ಟಣ. ಈ ನಗರ ಖಂಬಾತ್ ಕೊಲ್ಲಿಯ ಹತ್ತಿರ ಇದೆ. 1955 ರಿಂದ 1962ರ ವರೆಗೆ ಅಲ್ಲಿ ನಡೆಸಿಯಿದ ಉತ್ಖನನದಿಂದ ನಗರ ರಚನೆ ಮತ್ತು ಹಡಗುಗಳ ನಿಲುಗಡೆ(dock)ಯನ್ನು ಕಂಡುಹಿಡಿಯಲಾಯಿತು. ಲೊಥಲ್ ವಾಸಿಗಳ ಶಿಸ್ತುಪಾಲನೆಯು ನಮಗೆಲ್ಲಾ ಮಾರ್ಗದರ್ಶಕವಾಗಿದೆ. ಉದಾಹರಣೆ ಎಂದರೆ ಅವರು ಕ್ರಿ.ಪೂ. 2300 ರಿಂದ 1900ರ ವರೆಗೆ ಮೂರುಬಾರಿ ಪ್ರವಾಹದ ಹಾವಳಿಯಿಂದ ನಾಶವಾದ ನಗರವನ್ನು ಪುನರ್ರಚಿಸಬೇಕಾಗಿ ಬಂದಾಗ ಮೊದಲು ನಿರ್ಮಿಸಿದ ರಸ್ತೆಗಳನ್ನು ಒತ್ತದೆ ಮನೆಗಳನ್ನು ಕಟ್ಟಿದರು. ಒಳ ಚರಂಡಿಗಳು ಹಾಳಾಗದಂತೆ ನೋಡಿಕೊಂಡರು. ಇಷ್ಟಲ್ಲದೆ ಅಫ್ಘಾನಿಸ್ಥಾನದಿಂದ ಹಿಡಿದು ದೆಹಲಿವರೆಗೂ, ಕಾಶ್ಮೀರದಿಂದ ತಪತೀ ನದಿಯವರೆಗೂ ವಿಸ್ತಾರವಾದ ಸಿಂಧೂ ಸಾಮ್ರಾಜ್ಯದಲ್ಲೆಲ್ಲಾ ಒಂದೇ ಪ್ರಮಾಣದ ತೂಕ ಹಾಗೂ ಅಳತೆ ಉಪಯೋಗದಲ್ಲಿದ್ದವು. ಸಿಂಧೂ ಸಂಸ್ಕೃತಿಯ 26.28 ಗ್ರಾಂಸ ತೂಕ ಗ್ರೀಕ್ ಅನ್ನಿಯಾ ಹಾಗೂ ಇಂಗ್ಲೀಷ್ ಔನ್ಸ್‌ಗೆ ಆಧಾರವಾಯಿತೆಂದು ತಜ್ಞರ ಅಭಿಪ್ರಾಯ. ಸಿಧೂ ಜನರು ಅಳತೆಗಾಗಿ ದಶಾಂಶ ಪದ್ಧತಿ

---

*** ದಿನಾಂಕ 21-1-1983 ರಂದು ಪ್ರತಿಷ್ಠಾನದ ಆಶ್ರಯದಲ್ಲಿ ಶ್ರೀಯುತರು ನೀಡಿದ ದಿ॥ ಎಸ್. ಶ್ರೀಕಂಠಯ್ಯ ಸ್ಮಾರಕ ದತ್ತಿ ಉಪನ್ಯಾಸ.**

ಯನ್ನು ಜಾರಿಗೆ ತಂದಿದ್ದರು. ಲೋಥಲ್‌ನಲ್ಲಿ ದೊರೆತಿರುವ ಹಸ್ತಿದಂತದ ಅಳತೆಪಟ್ಟಿ (scale)ಯು ಮೇಲೆ 1.704 ಮಿಲಿಮೀಟರ್ ಉದ್ದವನ್ನು ಸೂಚಿಸುವ ವಿಭಾಗಗಳಿವೆ. ಹತ್ತು ವಿಭಾಗಗಳ ಮೊತ್ತ ಅರ್ಥಶಾಸ್ತ್ರದಲ್ಲಿ ಸೂಚಿಸಿರುವ ಅಂಗುಲಕ್ಕೆ ಸಮವಾಗಿದೆ. ಇದೇ ರೀತಿ ಚಿನ್ನ ಮೊದಲಾದವನ್ನು ತೂಕ ಮಾಡುವುದಕ್ಕೆ ಲೋಥಲ್ ನಾಗರಿಕರು ಉಪಯೋಗಿಸುತ್ತಿದ್ದ 50. 100. 150. 200, 500. 1000, 2000 ಮಿಲಿ ಗ್ರಾಂಗಳ ತೂಕಗಳನ್ನು ಪರಿಶೀಲಿಸಿದಲ್ಲಿ ಅರ್ಥಶಾಸ್ತ್ರದಲ್ಲಿ ಸಮೂದಿಸಿರುವ ಗುಂಜದ (ಗುಲಗಂಜಿ) ತೂಕವು 100 ಮಿಲಿಗ್ರಾಂಗಳಾಗಿಯೂ, ಅರ್ಧಗುಂಜ ಎಂದರೆ ಧಾನ್ಯದ ತೂಕ 50 ಮಿಲಿಗ್ರಾಂಗಳಾಗಿಯೂ ಇತ್ತೆಂದು ಹೇಳಬಹುದು. ಅಲ್ಲಿನ ಮಷ(ಮಾಶ)ಕ್ಕೆ ಸಮನಾದ 500 ಮಿಲಿಗ್ರಾಂಗಳ ತೂಕವು ಲೋಥಲ್‌ನಲ್ಲಿ ದೊರೆಯುತ್ತದೆ.

ಹರಪ್ಪ ಸಂಸ್ಕೃತಿಯು ಜನರು ಆರ್ಯರಂತೆ ಅಗ್ನಿಪೂಜಕರಾಗಿಯೂ, ಯಜ್ಞ ಯಾಗಾದಿಗಳನ್ನು ಮಾಡುವವರಾಗಿಯೂ ಇದ್ದುದಕ್ಕೆ ಲೋಥಲ್ ಕಾಲಿಬಂಗನ್ ಮತ್ತು ಮಹೆಂಜೊದಾರೋನಲ್ಲಿ ದೊರಕಿರುವ ಯಜ್ಞಚಿತಿಗಳೇ ಸಾಕ್ಷಿಯಾಗಿವೆ. ಇವರಲ್ಲಿ ಮೃತಪಟ್ಟವರನ್ನು ಹೂಳುವ ಹಾಗೂ ಸುಡುವ ಪದ್ಧತಿ ಇತ್ತೆಂದು ಹರಪ್ಪ, ಮೇಹಿ. ದಂಬ–ಬೂಥಿ ಮೊದಲಾದ ಸ್ಥಳಗಳಲ್ಲಿ ದೊರೆತ ಅಸ್ಥಿ ಅವಶೇಷ ಗಳಿಂದ ತಿಳಿದುಬರುತ್ತವೆ. ವೇದಗಳ ಕಾಲದಲ್ಲಿ ಸುಡುವ ಮತ್ತು ಹೂಳುವ ಪದ್ಧತಿ ಇತ್ತೆಂದು ಶತಪಥ ಬ್ರಾಹ್ಮಣದ ಆಧಾರದ ಮೇಲೆ ಹೇಳಬಹುದು. ಅಗ್ನಿದೇವತೆ ಯನ್ನು ಆರಾಧಿಸುತ್ತಿರುವಂತೆ ಸೂಚಿಸುವ ಅನೇಕ ಮುದ್ರೆಗಳು ಸಿಂಧೂ ಸಂಸ್ಕೃತಿಯ ವಸತಿಗಳಲ್ಲಿ ದೊರೆತಿವೆ. ಇಷ್ಟಲ್ಲದೆ ಯೋಗಾಸನದಲ್ಲಿ ಕುಳಿತಿರುವ ಮನುಷ್ಯರ ಮಣ್ಣಿನ ಆಕೃತಿಗಳಿಂದಲೂ ಮತ್ತು ಮುದ್ರೆಗಳ ಮೇಲೆ ಕೆತ್ತಿರುವ **ದೇವಗಳ** ಆಕೃತಿ ಗಳಿಂದಲೂ ಹರಪ್ಪನ್ನರು ಯೋಗಾಭ್ಯಾಸ ಮಾಡುತ್ತಿದ್ದರೆಂದು ನಿರ್ಧಾರವಾಗಿ ಹೇಳ ಬಹುದು. ಇವರು ಕುದುರೆಗಳನ್ನು ಸಾಕಿದ್ದರೆಂದೂ, ಅಕ್ಕಿ, ಗೋಧಿ, ಯವ ಮೊದ ಲಾದವನ್ನು ಹರಪ್ಪ, ಮೊಹೆಂಜೊದಾರೋ, ರೋಪರ್ (ಪಂಜಾಬ್) ಮತ್ತು ಲೋಥಲ್ ನಗರಗಳಲ್ಲಿ ದೊರೆತ ಅಸ್ಥಿಪಂಜರಗಳನ್ನು ಪರಿಶೀಲಿಸಿದ ಮಾನವ ಶಾಸ್ತ್ರಜ್ಞರು (Anthropologists) ಆರ್ಯರೆಂದು ಹೇಳಲ್ಪಡುವ ಈಗಿನ ಸಿಂಧ್, ಪಂಜಾಬ್ ಮತ್ತು ಗಜರಾತಿನ ನಿವಾಸಿಗಳಿಗೂ 4000 ವರ್ಷಗಳ ಹಿಂದೆ ನೆಲಸಿದ ಸಿಂಧೂ ಸಂಸ್ಕೃತಿಯ ಜನರಿಗೂ ಯಾವ ವ್ಯತ್ಯಾಸವೂ ಕಂಡುಬರುವುದಿಲ್ಲ ವೆಂದು ಅಭಿಪ್ರಾಯ ಪಟ್ಟಿದ್ದಾರೆ. ಈ ಎಲ್ಲ ವಿಷಯಗಳನ್ನು ಕೂಲಂಕಷವಾಗಿ ಪರಿಶೀಲಿಸಿದಲ್ಲಿ ವೇದಕಾಲೀನ ಸಂಸ್ಕೃತಿಯ ತಳಹದಿಯನ್ನು ಹಾಕಿದವರು ಸಿಂಧು ಸಂಸ್ಕೃತಿಯ ಜನರೆಂದೇ ಹೇಳಬಹುದು. ಸಿಂಧು ಮೊದಲಾದ ನದಿವಡದಲ್ಲಿದ್ದ ಹರಪ್ಪ, ಮೊಹೆಂಜೊದಾರೋ, ಚನ್ಹುದಾರೋ, ಲೋಥಲ್, ಕಾಲಿಬಂಗನ್ ಮೊದ ಲಾದ ಪಟ್ಟಣಗಳು ಪ್ರವಾಹದ ಹಾವಳಿಯಿಂದ ಕ್ರಿ.ಪೂ. 1900ರಲ್ಲಿ ನಾಶವಾದುದಕ್ಕೆ

ಸಾಕಷ್ಟು ಆಧಾರವಿದೆ. ಆದುದರಿಂದ ಆರ್ಯರ ಧಾಳಿಯಿಂದ ಸಿಂಧೂ ಸಂಸ್ಕೃತಿ ನಾಶವಾಯಿತೆಂದು ಹೇಳಲಾಗದು. ಇತ್ತೀಚಿನ ಸಂಶೋಧನೆಯಿಂದ ಕ್ರಿ.ಪೂ. 1900 ನಂತರ ಹರಪ್ಪನ್ನರು ಸಿಂಧೂ ಕಣಿವೆಯನ್ನು ಬಿಟ್ಟು ಪೂರ್ವಕ್ಕೆ ಹೋಗಿ ಸರಸ್ವತಿ. ದೃಷದ್ವತಿ ಮತ್ತು ಯಮುನಾ ನದಿಗಳ ಕಣಿವೆಗಳಲ್ಲಿಯೂ ದಕ್ಷಿಣದಲ್ಲಿ ಸಬರಮತಿ (ಗುಜರಾತ್). ನರ್ಮದಾ. ತಪತಿ ಮತ್ತು ಗೋದಾವರಿ ನದೀಕಣಿವೆಗಳಲ್ಲಿಯೂ ಸಣ್ಣಸಣ್ಣ ಹಳ್ಳಿಗಳಲ್ಲಿ ವಾಸಿಸುತಿದ್ದರೆಂದು ತಿಳಿದುಬಂದಿದೆ. ಇಂತಹ 200 ಹಳ್ಳಿಗಳನ್ನು ಗುಜರಾತ್‌ನಲ್ಲಿಯೂ 250 ಹಳ್ಳಿಗಳನ್ನು ಹರಿಯಾಣ–ಪಂಜಾಬ್‌ನಲ್ಲಿಯೂ ಮತ್ತು 250ಕ್ಕೂ ಹೆಚ್ಚು ವಸತಿಗಳನ್ನು ಪಾಕಿಸ್ತಾನದ ಬಹವಲ್‌ಪುರ ಜಿಲ್ಲೆಯಲ್ಲಿಯೂ ನೋಡಬಹುದು.

## ಸಿಂಧೂ ಲಿಪಿ

ಅಕ್ಷರಸ್ಥರಷ್ಟೆ ಅಲ್ಲದೇ ಸುಸಂಸ್ಕೃತರೂ ಆಗಿದ್ದ ಸಿಂಧೂ ಜನರ ಧ್ಯೇಯಗಳನ್ನೂ ವಿವಿಧ ಕ್ಷೇತ್ರಗಳಲ್ಲಿ ನಡೆಯಿಸಿದ ಪ್ರಗತಿಯನ್ನೂ ಅರಿತುಕೊಳ್ಳಲು ಅವರ ಭಾಷೆ ಮತ್ತು ಬರಹವನ್ನು ಕಂಡುಹಿಡಿಯುವುದು ಅತ್ಯಾವಶ್ಯಕ. ಸಿಂಧೂ ಸಂಸ್ಕೃತಿ ಜನರ ಸುಮಾರು 3100 ಬಳಪಕಲ್ಲಿನ ಮತ್ತು ಮಣ್ಣಿನ ಮುದ್ರೆಗಳ ಮೇಲಿರುವ ಬರಹವನ್ನು ಓದಲು ಭಾರತೀಯರಲ್ಲದೆ ಜರ್ಮನಿ, ಇಂಗ್ಲೇಂಡ್, ಅಮೆರಿಕಾ, ರಷ್ಯ, ಫಿನ್‌ಲೆಂಡ್ ಮೊದಲಾದ ದೇಶಗಳಲ್ಲಿರುವ ಲಿಪಿ ಮತ್ತು ಭಾಷೆಯ ತಜ್ಞರು 50 ವರ್ಷಗಳಿಂದ ಪ್ರಯತ್ನ ಮಾಡುತಿದ್ದಾರೆ. ಕೆಲವರು ಸಿಂಧೂ ಮುದ್ರೆಗಳ ಮೇಲಿರುವ ಲಿಪಿಯನ್ನು ಚಿತ್ರಲಿಪಿ (Pictograph) ಅಥವಾ ಭಾವಲಿಪಿ (Ideograph) ಅಥವಾ ಪದಲಿಪಿ (Logograph) ಎಂದು ಭಾವಿಸಿರುವುದಕ್ಕೆ ಕಾರಣವೇನೆಂದರೆ ಈ ಲಿಪಿಯಲ್ಲಿ ಪಕ್ಷಿ, ಮೀನು, ಮನುಷ್ಯ, ಚೇಳು, ಅಶ್ವತ್ಥದ ಎಲೆ ಮೊದಲಾದ ಚಿತ್ರಗಳಿರುವುದೇ ಕಾರಣ. ಈ ಚಿತ್ರಗಳಿಗಲ್ಲದೆ ಇತರ ರೋಮನ್ ಅಕ್ಷರಗಳಂತಿರುವ (E, H, D, P, U, W, X, Y) ಚಿಹ್ನೆಗಳನ್ನೂ ಚಿತ್ರಗಳೆಂದು ಊಹಿಸಿ ಆ ಚಿತ್ರಗಳಿಗೆ ದ್ರಾವಿಡ (ಪ್ರಾಚೀನ ತಮಿಳು) ಭಾಷೆಯಲ್ಲಿರುವ ಶಬ್ದಗಳ ಆಧಾರದ ಮೇಲೆ ಮೌಲ್ಯವನ್ನು ಕೊಟ್ಟು ದ್ರಾವಿಡ ಭಾಷೆಯಂತೆ ಓದಲು ಮಾಡಿದ ಪ್ರಯತ್ನಗಳು ಸಮರ್ಪಕವಾಗಿಲ್ಲ. ಇತ್ತೀಚೆಗೆ ಗಣಕಯಂತ್ರದ (computer) ಸಹಾಯದಿಂದ ಸಿಂಧೂಲಿಪಿಯಲ್ಲಿರುವ ಚಿಹ್ನೆಗಳ ಸಮುದಾಯವನ್ನು ಬೇರೆ ಬೇರೆ ಮಾಡಿ ಕೆಲವು ಲಿಂಗ. ವಚನ. ವಿಭಕ್ತಿಯನ್ನು ಸೂಚಿಸುವುವೆಂದು ಫಿನಿಷ್ ವಿದ್ವಾಂಸರು ಊಹಿಸಿದರು. ರಷ್ಯನ್ ವಿದ್ವಾಂಸರು ಸಿಂಧೂ ಮುದ್ರೆಗಳ ಮೇಲೆ ನಕ್ಷತ್ರಗಳ ಹೆಸರುಗಳು ಇವೆಯೆಂದು ಹೇಳುತ್ತಾರೆ. ಉದಾಹರಣೆಗೆ ಆರು ಗೀಟುಗಳ ಮುಂದೆ ಮೀನಿನ ಚಿಹ್ನೆ ಇರುವುದರಿಂದ 'ಆರ್ ಮೀನ್' ಎಂದು ಅರ್ಥಮಾಡಿ ಇದು ದ್ರಾವಿಡ ಭಾಷೆಯಲ್ಲಿ ಕೃತ್ತಿಕಾ ನಕ್ಷತ್ರದ ಹೆಸರೆಂದು ಹೇಳುತ್ತಾರೆ. ಆದರೆ ವೇದಾಂಗ

ಜ್ಯೋತಿಷ್ಯದ ಕಾಲದಲ್ಲಿ ಕೂಡಾ ಕೃತ್ತಿಕೆಯಲ್ಲಿ 7 ನಕ್ಷತ್ರಗಳ ಗುಂಪು ಕಾಣುತ್ತಿದ್ದು ರಿಂದ ಸಿಂಧೂ ಸಂಸ್ಕೃತಿಯ ಕಾಲದಲ್ಲಿ ಕೃತ್ತಿಕೆಯಲ್ಲಿ 6 ನಕ್ಷತ್ರಗಳು ಇದ್ದವೆಂದ ಹೇಳಿದರೆ ತಪ್ಪಾಗುತ್ತದೆ. ಇಷ್ಟಲ್ಲದೆ ಮೀನು ಮೊದಲಾದ ಚಿಹ್ನೆಗಳನ್ನು ಚಿತ್ರಲಿ ಯಾಗಿ ಉಪಯೋಗಿಸದೆ ಧ್ವನ್ಯಾತ್ಮಕವಾಗಿ ಉಪಯೋಗಿಸಿರುವುದನ್ನು ಅವುಗಳಿ ಸೇರಿಸಿದ ಸ್ವರಚಿಹ್ನೆಗಳಿಂದ ಸ್ಪಷ್ಟವಾಗುತ್ತದೆ.

**ಸಿಂಧು ಲಿಪಿ ಧ್ವನ್ಯಾತ್ಮಕ**

ಸಿಂಧು ಲಿಪಿಯಲ್ಲಿ 300 ಅಥವಾ 400 ಚಿಹ್ನೆಗಳಿರುವುವೆಂದೂ ಆದ್ದರಿಂ ಈ ಲಿಪಿಯು ಭಾವಲಿಪಿ ಅಥವಾ ಪದಲಪಿ ಎಂದು ಐ. ಮಹಾದೇವನ್, ಪ್ರೊ. ಕ್ನೊ ರೊಜೆವ್, ಡಾ। ಪಾರ್ಪೊಲ, ಫಾದರ್ ಹೀರಾಸ್, ಡಾ। ಫೇರ್ ಸರ್ವಿಸ್ ಹೇಳಿದ್ದಾರೆ ಕೂಲಂಕಷವಾಗಿ ನೋಡಿದಲ್ಲಿ ಸಿಂಧು ಲಿಪಿಯ 300 ಮೂಲ ಚಿಹ್ನೆಗಳಲ್ಲಿ ಕೇವ 62 ಅಥವಾ 64 ಮೂಲ ಚಿಹ್ನೆಗಳಿವೆ. ಇಷ್ಟು ಅತ್ಯಲ್ಪ ಚಿಹ್ನೆಗಳುಳ್ಳ ಲಿಪಿಯು ಧ್ವನ್ಯಾತ್ಮಕವಾಗಿರಬೇಕೇ ಹೊರತು ಭಾವಲಿಪಿಯಾಗಲಿ ಪದಲಿಪಿಯಾಗಲಿ ಅಥವಾ ಚಿತ್ರಲಿಪಿಯಾಗಲೀ ಆಗಲು ಸಾಧ್ಯವಿಲ್ಲ, ಕಾರಣವೇನೆಂದರೆ ಪ್ರತಿಯೊಂದು ವಸ್ತು ವನ್ನು ಅಥವಾ ಅಭಿಪ್ರಾಯವನ್ನು ಸೂಚಿಸಬೇಕಾದರೆ ಈ ಲಿಪಿಗಳಲ್ಲಿ ಸಾವಿರಾರು ಚಿಹ್ನೆಗಳಿರಬೇಕು.

ಸಿಂಧು ಲಿಪಿಯಲ್ಲಿನ ಮೂಲ ಚಿಹ್ನೆಗಳನ್ನು ಗುರುತಿಸುವುದು ಅಷ್ಟೇನೂ ಕಷ್ಟ ವಲ್ಲ. ಏಕೆಂದರೆ ಮೂಲಚಿಹ್ನೆಯನ್ನು ಮತ್ತು ಅದರ ರೂಪಾಂತರವನ್ನು ಬೇರೆ ಬೇರೆಯಾಗಿ ಬರೆದಿರುವುದನ್ನು ನೋಡಬಹುದು. ಉದಾ. ಇಂಗ್ಲೀಷ್ ಅಕ್ಷರ ಬಿಲ್ಲಿನ ಆಕಾರದ D ಚಿಹ್ನೆಗೆ ಹೆಚ್ಚಿನ ಸಣ್ಣ ರೇಖೆಗಳನ್ನು ಸೇರಿಸಿರುವುದನ್ನೂ, ಸೇರಿಸದೆ ಇರುವುದನ್ನೂ ಬೇರೆ ಬೇರೆಯಾಗಿ ಬರೆದಿರುವುದರಿಂದ D ಮೂಲಚಿಹ್ನೆ ಎಂದು ಹೇಳಬಹುದು. ಇದೇ ರೀತಿಯಾಗಿ E. X. P, H. Y ಮತ್ತಿತರ ಮೂಲ ರೇಖೆಗಳಿಗೆ ಸಣ್ಣ ಸಣ್ಣ ರೇಖೆಗಳನ್ನು ಸೇರಿಸಿರುವುದು. ಇದರ ಉದ್ದೇಶವನ್ನು ತಿಳಿಯಲು ಅಶೋಕನ ಶಿಲಾ ಶಾಸನಗಳ ಬ್ರಾಹ್ಮೀ ಲಿಪಿಯನ್ನು ಪರಿಶೀಲಿಸಿದಲ್ಲಿ. ವ್ಯಂಜನಗಳಿಗೆ ಸ್ವರವನ್ನು ಸೂಚಿಸಲು ಈ ಸಣ್ಣ ರೇಖೆಗಳ ಜೋಡಣೆಯಾಗುತ್ತಿತ್ತು. ಸಿಂಧೂ ಲಿಪಿಕಾರರೂ ಕೂಡ ಇದೇ ಉದ್ದೇಶದಿಂದ ಮೂಲಚಿಹ್ನೆಗಳಿಗೆ ಸಣ್ಣ ರೇಖೆ ಗಳನ್ನು ಸೇರಿಸುತ್ತಿದ್ದರು. ಉದಾ. ಕಾ, ಕೇ. ಕೋ ಇತ್ಯಾದಿ ಬರೆಯಲು 'ಕ' ಚಿಹ್ನೆಗೆ 1 ರಿಂದ 3 ರೇಖೆಗಳನ್ನು ಸೇರಿಸುತ್ತಿದ್ದರು. ಸ್ವರ ಚಿಹ್ನೆ ಹೊಂದಿರುವ ಯಾವ ಲಿಪಿಯೇ ಆಗಲೀ ಧ್ವನ್ಯಾತ್ಮಕ (phonetic) ಎಂದರೆ ಶಬ್ದಲಿಪಿ (syllabic) ಅಥವಾ ವರ್ಣಮಾಲೆ (alphabetic) ಆಗಿರಬೇಕೇ ಹೊರತು ಚಿತ್ರಲಿಪಿ, ಭಾವಲಿಪಿ ಅಥವಾ ಪದಲಿಪಿಯಾಗಲು ಸಾಧ್ಯವಿಲ್ಲ.

## EXAMPLES OF NUMEROUS COMPOUND SIGNS FORMED BY COMBINING A FEW SIMPLE SIGNS



ಚಿತ್ರ 1. ಮೂಲಚಿಹ್ನೆಗಳಿಗೆ ಸ್ವರಚಿಹ್ನೆಗಳಾದ ಸಣ್ಣ ರೇಖೆಗಳನ್ನು ಸೇರಿಸಿ, ಅಥವಾ ಒಂದಕ್ಕೊಂದು ಬೇರೆ ಬೇರೆ ಮೂಲರೇಖೆಗಳನ್ನು ಸೇರಿಸಿ, ಅಥವಾ ಒಂದೇ ತರಹದ ಮೂಲರೇಖೆಗಳನ್ನು ಸೇರಿಸಿ ಸಂಯುಕ್ತಾಕ್ಷರಗಳನ್ನು ಬರೆಯುತ್ತಿದ್ದರು. ಇಲ್ಲಿ ಕೇವಲ 7 ಮೂಲರೇಖೆಗಳ ಸಹಾಯದಿಂದ 53 + 51 = 104 ಬೇರೆ ಬೇರೆ ಚಿಹ್ನೆಗಳಂತಿರುವ ಚಿತ್ರದಂತೆ ಕಾಣುವ ಅಕ್ಷರಗಳನ್ನು ಹರಪ್ಪನ್ನರು ಬರೆದಿರುವರು.

# SEMITIC & INDUS SIGNS

| S NO | PHONETIC VALUE | OLD NORTH SEMITIC SIGNS 16th-13th c BC | HARAPPAN SIGNS | LATE HARAPPAN SIGNS |
|---|---|---|---|---|
| 1 | b | | | |
| 2 | g | | | |
| 3 | d | | | |
| 4 | h | | | |
| 5 | w | | | |
| 6 | ḥ | | | |
| 7 | th | | | |
| 8 | k | | | |
| 9 | n | | | |
| 10 | s | | | |
| 11 | ʿ (ay) | | | |
| 12 | p | | | |
| 13 | r | | | |
| 14 | sh | | | |
| 15 | t | | | |
| 16 | ś | | | |
| 17 | h | | | |
| 18 | m | | | |
| 19 | o | | | |
| 20 | ṭ | | | |
| 21 | ś | | | |

• SSEMITIC

**ಚಿತ್ರ 2**

ಸೆಮಿಟಿಕ್ ಮೂಲ ಚಿ... ಗಳೊಂದಿಗೆ ಹರಪ್ಪ ಮತ... ಅಂತ್ಯಹರಪ್ಪ (Late Har... ppa) ರೇಖಾ ಚಿಹ್ನೆಗ... ಹೊಂದಿಕೊಳ್ಳುವುದರಿಂ... ಸೆಮಿಟಿಕ್ ಧ್ವನಿಮೌಲ್ಯವನ... ಸಿಂಧುಲಿಪಿಯ ಮೂಲಚಿ... ಗಳಿಗೆ ಕೊಡಲಾಗಿದೆ.

—

| | |
|---|---|
| ಬ್ | 1 |
| ಗ್ | 2 |
| ದ್ | 3 |
| ಹ್ | 4 |
| ವ್ | 5 |
| ಹ್ರ್ | 6 |
| ಥ್ | 7 |
| ಕ್ | 8 |
| ನ್ | 9 |
| ಸ್ | 10 |
| ಅಯ್ | 11 |
| ಪ್ | 12 |
| ರ್ | 13 |
| ಷ್ | 14 |
| ತ್ | 15 |
| ಶ್ | 16 |
| ಖ್(ಹ) | 17 |
| ಮ್ | 18 |
| ಅ | 19 |
| ಋ | 20 |
| ಶ್ | 21 |





ಜ್ವಾಲೆಯ ನಡುವೆ ನಿಂತಿರುವ ಅಗ್ನಿ

←
ಅ—ರ್ಕ—ಗ್ಭ

→
= ಭಗ—ಅರ್ಕ ಎಂದರೆ ದಯಾಳು ಅಥವಾ ಸ್ವಾಮಿ ಅರ್ಕ ಎಂದು ಅರ್ಥ.

ಚಿತ್ರ 4.



ಚಿತ್ರ 5

←
ಅ—ಶ—ಓ—ದತ್ರಿ—ಮ—ರ

→
= ರಮ—ತ್ರಿದ—ಓಷಾ

ಎಂದರೆ, ಆಹ್ಲಾದಕರ(ನಾಗಿ) ಮೂರು ವಿಧದಲ್ಲಿ ಪ್ರಕಾಶಿಸುವವನು ಎಂದು ಅರ್ಥ.

ಇಲ್ಲಿ ತ್ರಿಮುಖನಾದ ಅಗ್ನಿಯು ಮೂರು ರೂಪಗಳನ್ನು (ಅಗ್ನಿ, ಸೂರ್ಯ ಮತ್ತು ಸಿಡಿಲು) ಸೂಚಿಸುವ ಮೂರ್ತಿ ಇದೆ.



ಚಿತ್ರ 6 ಏಕಶೃಂಗಿ (ಮೃಗ)



ಅ ಕ್ಕ ಶ ” ಷ



=ಷ ” ಶಕ್ಕ ಎಂದರೆ ರಕ್ಷಕ ” ಬಲಿಷ್ಠ (ರ್ಶ) ಎಂದು ಅರ್ಥ



ಚಿತ್ರ 7

←
ಹಾ—ಹ್ಪ—ಹ್ಪ =

→
ಪಹ್—ಪಹ್—ಹಾ = ರಾಜಾಧಿರಾಜನ (ಮುದ್ರೆ)

ಪಹ್ ಎಂದರೆ ಹಿಟ್ಟೈಟ್ ಭಾಷೆಯಲ್ಲಿ ಕಾಪಾಡುವವನು ಎಂದು ಅರ್ಥ. ಹಿಟ್ಟೈಟ್ ಮತ್ತು ಸಿಂಧು ಹಾಗೂ ವೇದಕಾಲೀನ ಸಂಸ್ಕೃತ ಒಂದೇ ಗುಂಪಿಗೆ ಸೇರಿದವು.

**ಸಂಯುಕ್ತಾಕ್ಷರಗಳು :**

ಮೂಲ ಚಿಹ್ನೆಗಳಲ್ಲಿ ಸ್ವರ ಸೂಚನಾತ್ಮಕ ರೇಖೆಗಳನ್ನು ಸಿಂಧು ಲಿಪಿಕಾರರು ಸೇರಿಸುವುದಲ್ಲದೆ ಮೂಲಚಿಹ್ನೆಗಳನ್ನೇ ಒಂದಕ್ಕೊಂದು ಜೋಡಿಸುತ್ತಿದ್ದರು. ಉದಾ. 'ಅಶ್ವತ್ಥದ ಎಲೆ' ಚಿಹ್ನೆಗೆ E ಮತ್ತು V ಎಂಬ ಚಿಹ್ನೆಗಳನ್ನು ಸೇರಿಸುವುದನ್ನು ನೋಡಬಹುದು. ಇದೇ ರೀತಿ E ಮತ್ತು V ಚಿಹ್ನೆಗಳನ್ನು ಚೇಳಿನ ಚಿಹ್ನೆಗೂ ಮತ್ತಿತರ ಚಿಹ್ನೆಗಳಿಗೂ ಸೇರಿಸಿದರು. ಇಷ್ಟಲ್ಲದೆ ಮನುಷ್ಯನ ಆಕೃತಿಗೆ ಅನೇಕ ಮೂಲ ರೇಖಾ ಚಿಹ್ನೆಗಳನ್ನು ಸೇರಿಸಿರುವುದನ್ನು ನೋಡಬಹುದು. ಇವೆಲ್ಲಾ ಚಿತ್ರಗಳಂತೆ ಕಂಡರೂ ಅವುಗಳು ಧ್ವನ್ಯಾತ್ಮಕವಾಗಿಯೇ ಇದ್ದವು. ಉದಾ. ಗುರಾಣಿ ಚಿಹ್ನೆಗೆ 'ಪ' ಎಂಬ ಧ್ವನಿ ಮೌಲ್ಯವಿದ್ದು ಮನುಷ್ಯನ ಚಿಹ್ನೆಗೆ ಋ ಮೌಲ್ಯವಿದ್ದು ಇವೆರಡನ್ನೂ ಸೇರಿದ ಚಿಹ್ನೆಗೆ ಯೋಧನಂತೆ ಕಂಡರೂ ಅದರ ಮೌಲ್ಯ ಪ+ಋ=ಪೃ ಎಂದು ತಿಳಿಯಬೇಕು. ಪೃ ಎಂದರೆ ಅಕ್ಷರ ಅಥವಾ ರಕ್ಷಣೆ ಎಂದು. ಸಿಂಧು ಲಿಪಿ ಕಾರರು ಕೇವಲ 7 ಮೂಲ ರೇಖಾಚಿಹ್ನೆಗಳನ್ನು ಒಂದಕ್ಕೊಂದು ಸೇರಿಸುವುದ ರಿಂದಲೂ, ಅವುಗಳಿಗೆ ಸ್ವರಸೂಚಕ ಸಣ್ಣ ರೇಖೆಗಳನ್ನು ಹಚ್ಚುವುದರಿಂದಲೂ ಸುಮಾರು 104 ಬೇರೆ ಬೇರೆ ಚಿಹ್ನೆಗಳಂತೆ ಕಂಡುಬರುವ ಚಿಹ್ನೆಗಳನ್ನು ಬರೆಯು ತ್ತಿದ್ದರು (ಚಿತ್ರ 1).

**ವರ್ಣಮಾಲೆ** : ಮೊಟ್ಟಮೊದಲು ಸಿಂಧು ಲಿಪಿಯಲ್ಲಿ (ಕ್ರಿ.ಪೂ. 2400–1900) ಚೇಳು ಮೊದಲಾದ ಚಿತ್ರಗಳೂ ಸೇರಿ 62 ಮೂಲಚಿಹ್ನೆಗಳಿದ್ದವು. ಅವು ಗಳಲ್ಲಿ 22 ಚಿತ್ರಗಳು ಶಬ್ದಲಿಪಿಯಾಗಿಯೂ 40 ವರ್ಣಮಾಲೆ ರೀತಿಯಲ್ಲಿ ಉಪಯೋಗಿಸಲ್ಪಟ್ಟಿದ್ದವು. ಕೊನೆಯ ಹಂತದಲ್ಲಿ (ಕ್ರಿ.ಪೂ. 1900–1600) ಅಶ್ವತ್ಥದ ಎಲೆ, ಚೇಳು, ಪರ್ವತ, ಹೊಲ, ದುಂಬಿ ಮೊದಲಾದ ಚಿತ್ರಗಳನ್ನು ತೆಗೆದುಹಾಕುವುದಲ್ಲದೆ ರೇಖಾಚಿಹ್ನೆಗಳ ಸಂಖ್ಯೆಯನ್ನು ಕೂಡ 40 ರಿಂದ 22ಕ್ಕೆ ಇಳಿಸಲಾಯಿತು (ಚಿತ್ರ 2). ಈ ರೀತಿ ಹರಪ್ಪನ್ನರು 22 ರೇಖಾಚಿಹ್ನೆಗಳುಳ್ಳ ವರ್ಣಮಾಲೆಯನ್ನು ರಚಿಸಿ ಮಿತವ್ಯಯ ದೃಷ್ಟಿಯಿಂದಲೂ ಸರಳರೇಖಾ ದೃಷ್ಟಿ ಯಿಂದಲೂ ಅನುಕೂಲವಾದ ಈ ಲಿಪಿಯಲ್ಲಿ ಯಾವ ಭಾಷೆಯನ್ನಾದರೂ ಬರೆಯ ಬಹುದಾಗಿತ್ತು.

**ಧ್ವನಿಮೌಲ್ಯ** (ಚಿತ್ರ 2) : ಸಿಂಧುಲಿಪಿಯ ಮೂಲ ಚಿಹ್ನೆಗಳಿಗೆ ಧ್ವನಿಮೌಲ್ಯ ವನ್ನು ಕೊಡುವ ಸೆಮಿಟಿಕ್ ಲಿಪಿಯ ಸಹಾಯವನ್ನು ತೆಗೆದುಕೊಳ್ಳಲಾಗಿದೆ. ಕಾರಣವೇನೆಂದರೆ (1) ಅಂತ್ಯ ಹರಪ್ಪ ಲಿಪಿಗೂ ಸೆಮಿಟಿಕ್ ಲಿಪಿಗೂ ಹೆಚ್ಚು ಕಾಲ ವ್ಯತ್ಯಾಸವಿಲ್ಲ. (2) ಈ ಎರಡೂ ಲಿಪಿಗಳಲ್ಲಿ ಶೇಕಡ 75ರಷ್ಟು ಚಿಹ್ನೆಗಳು ಸಮಹೋಲಿಕೆಯುಳ್ಳವುಗಳಾಗಿವೆ. ಅಂತ್ಯ ಹರಪ್ಪ (Late Harappan) ಲಿಪಿಯ 22 ಚಿಹ್ನೆಗಳಲ್ಲಿ 20 ಚಿಹ್ನೆಗಳು ಸೆಮಿಟಿಕ್ ಲಿಪಿಯ ಚಿಹ್ನೆಗಳನ್ನು ಹೋಲು ತ್ತವೆ. (3) ಈ ಎರಡೂ ಲಿಪಿಗಳನ್ನು ಬಲದಿಂದ ಎಡಕ್ಕೆ ಬರೆಯುತ್ತಿದ್ದರು.

(4) ಫೋನಿಷಿಯನ್ (ಸೆಮಿಟಿಕ್) ಮೊದಲಾದ ಜನರು ಮಕ್ರಾನ್ (ಬಲೂಚಿ-ಸ್ತಾನ್) ಜನರೊಂದಿಗೆ ವ್ಯಾಪಾರ ಮಾಡುತ್ತಿದ್ದರು.

ಸೆಮಿಟಿಕ್ ರೇಖಾ ಚಿಹ್ನೆಗಳು ಇರುವ 137 ಸಿಂಧು ಶಾಸನಗಳನ್ನು ಮೊದಲನೆ ಹಂತದಲ್ಲಿ ಓದಿದ ಮೇಲೆ ಅನೇಕ ಶಬ್ದಗಳು ಸಂಸ್ಕೃತ ಭಾಷೆಗೆ ಸೇರಿದಂತೆ ಕಂಡು ಬಂದುದರಿಂದ ಸಿಂಧು ಭಾಷೆಯು ಪ್ರಾಚೀನ ಇಂಡೋ ಯುರೋಪಿಯನ್ ಭಾಷೆ (old Indo-European) ಭಾಷೆಯ ಗುಂಪಿಗೆ ಸೇರಿದುದೆಂದು ಗೊತ್ತಾಯಿತು.

**ಸಿಂಧು ಭಾಷೆ :**

ಸಿಂಧುಲಿಪಿಯ ಭಾಷೆ ಇಂಡೋ ಯುರೋಪಿಯನ್ ಗುಂಪಿಗೆ ಸೇರಿದ ಪೂರ್ವ ಆರ್ಯ (old Indo-Aryan) ಭಾಷೆಯಾಗಿರುವುದು ಕಂಡುಬರುತ್ತದೆ. ಸಿಂಧುಲಿಪಿಕಾರರು ಸ್ವರಚಿಹ್ನೆಗಳನ್ನೂ ಸಂಯುಕ್ತಾಕ್ಷರಗಳನ್ನೂ ಉಪಯೋಗಿಸು ತ್ತಿದ್ದರು, ಸೆಮಿಟಿಕ್ ಲಿಪಿಯಲ್ಲಿ ಸ್ವರಗಳಾಗಲೀ ಸಂಯುಕ್ತಾಕ್ಷರಗಳಾಗಲೀ ಇಲ್ಲದಿರು ವುದೇ ಭಾಷಾವ್ಯತ್ಯಾಸಕ್ಕೆ ಕಾರಣ.

**ಶಾಸನಗಳನ್ನು ಓದುವ ವಿಧಾನ :**–ಮೊಟ್ಟಮೊದಲು ಅತಿ ಸರಳವಾದ ಚಿಹ್ನೆಯು ಶಾಸನಗಳನ್ನು ತೆಗೆದುಕೊಳ್ಳಲಾಯಿತು. ಅವುಗಳಲ್ಲಿಯೂ ಸೆಮಿಟಿಕ್ ಚಿಹ್ನೆಗಳನ್ನೇ ಹೊಂದಿರುವ ಸಿಂಧು ಮೂಲಚಿಹ್ನೆಗಳು (Basic signs) ಇರುವ 137 ಶಾಸನ ಗಳನ್ನು ಓದಿದಾಗ ಸಂಸ್ಕೃತ ಶಬ್ದಗಳನೇಕವು ಕಂಡುಬಂದವು. ಎರಡನೆ ಹಂತದಲ್ಲಿ ಮನುಷ್ಯನ ಮತ್ತು ಮೀನಿನ ಆಕೃತಿಯ ಚಿಹ್ನೆಗಳಿಗೆ ಕ್ರಮವಾಗಿ **ಋ** (ನೃ=ನರ= ಮನುಷ್ಯ ಮತ್ತು **ಶ** (ಶಕುಲ, ಒಂದು ತರಹದ ಮೀನು) ಎಂಬ ಧ್ವನಿಮೌಲ್ಯ ಕೊಡ ಲಾಯಿತು. ಈ ಚಿಹ್ನೆಗಳುಳ್ಳ 500 ಶಾಸನಗಳಿಂದ ಸಿಂಧುಭಾಷೆ ಸಂಸ್ಕೃತಕ್ಕೆ ಸಂಬಂಧಿಸಿದ್ದೆಂದು ನಿರ್ಧಾರವಾಯಿತು.

ಧ್ವನಿ ವಿಜ್ಞಾನ, ಅರ್ಥ ಹಾಗೂ ವ್ಯಾಕರಣ ದೃಷ್ಟಿಯಿಂದ ಸಿಂಧು ಭಾಷೆಯನ್ನು ಋಗ್ವೇದದ ಭಾಷೆಯ ಹಿಂದಿನ ಹಂತಕ್ಕೆ ಸೇರಿಸಬಹುದು. ಸಂವೃತ ಚಿಹ್ನೆ V (ಅರ್ಥ– ಅ) ಸಹಾಯದಿಂದ ಅ, ಆ, ಏ (diphthong) ಮತ್ತು ಓ (diphthong) ಗಳನ್ನು ಸೂಚಿಸಲಾಗುತಿತ್ತು. ಆದರೆ ತಾಲವ್ಯ, ಮೂರ್ಧನ್ಯಗಳಿಗೆ ಚಿಹ್ನೆಗಳಿಲ್ಲ. ಇಂಡೋ ಯುರೋಪಿನ ಭಾಷೆಗಳ ಗುಂಪಿಗೆ ಸೇರಿದ ಅವೆಸ್ತ ಮತ್ತು ಹಿಟೈಟ್ ಭಾಷೆಯಂತೆ ಸಿಂಧುಭಾಷೆಯಲ್ಲಿಯೂ 3 ಹಂತವನ್ನು ಸೂಚಿಸುವ ಕೃತಗಳಿಗೆ ಬೇರೆ ಬೇರೆ ಚಿಹ್ನೆಗಳಿವೆ. ಒಂದಕ್ಕಿಂತ ಹೆಚ್ಚು ವ್ಯಂಜನಗಳನ್ನು ಒಂದಕ್ಕೊಂದು ಜೋಡಿಸಿ ಸಂಯುಕ್ತಾಕ್ಷರಗಳು ದ್ರಾವಿಡಲಿಪಿಗಳಲ್ಲಿಲ್ಲ. ಈ ರೀತಿಯ ಸಂಯುಕ್ತಾಕ್ಷರಗಳು ಸಿಂಧು ಭಾಷೆಯಲ್ಲಿ ಇರುವುದರಿಂದ, ಇದು ದ್ರಾವಿಡ ಭಾಷೆಯಾಗಿರಲಾರದು. ಮತ್ತು ಪ್ರಾತ್ಯಯಿಕ ಭಾಷೆಯಾಗಿರುವುದರಿಂದ ಸುಮೇರಿಯನ್ ಭಾಷೆಯ ಗುಂಪಿಗೂ ಸೇರಿಲ್ಲ. ಸಿಂಧುಲಿಪಿಯು ಕೊನೆಯ ಹಂತದಲ್ಲಿ ವರ್ಣ ಲಿಪಿಯಾದಾಗ ಅ ($\frac{1}{2}$) ಋ ಅ ಯ್, ಕ್, ಗ್, ತ್. ದ್, ನ್, ಪ್, ಟ್, ಮ್, ರ್, ವ್, ಶ್, ಷ್, ಸ್,

ಹ್, ಹ್$_1$ ಹ್$_3$ ಧ್ವನಿಗಳಿಗೆ ಚಿಹ್ನೆಗಳಿದ್ದವು. ಮಹಾಪ್ರಾಣಗಳನ್ನು ಬರೆಯಲು ಅಲ್ಪಪ್ರಾಣಕ್ಕೆ 'ಹ' ಸೇರಿಸುತ್ತಿದ್ದರು ಉದಾ. ಕ+ಹ=ಖ ಗ+ಹ=ಘ ಇತ್ಯಾದಿ ಅ ½ ಚಿಹ್ನೆಗೆ ರೇಖೆಗಳನ್ನು ಸೇರಿಸಿ ಅ. ಆ. ಎ. ಒ ಸ್ವರಗಳನ್ನು ಬರೆಯುತ್ತಿದ್ದರು.

ಮೊದಲನೆ ಹಂತದಲ್ಲಿ ಕೇವಲ ಸೆಮೆಟಿಕ್ ಚಿಹ್ನೆಗಳನ್ನು ಹೋಲುವ ಸಿಂಧು ಚಿಹ್ನೆಗಳನ್ನುಳ್ಳ ಶಾಸನಗಳನ್ನು ಓದಿ, ಭಾಷಾಪರಿಚಯ ಮಾಡಿಕೊಂಡು ನಂತರ ಇತರ ಚಿಹ್ನೆಗಳಿಗೂ ಚಿತ್ರಗಳಿಗೂ ಆ ಭಾಷೆಯನ್ನು ಧ್ವನಿಮೌಲ್ಯ ಕೊಡಲಾಗಿದೆ, ಸಿಂಧುಲಿಪಿಯಲ್ಲಿ ಒಂದು, ಏಳು, ಹತ್ತು ಮತ್ತು ನೂರಕ್ಕೆ ಕ್ರಮವಾಗಿ ಏಕ. ಸಪ್ಟ (ಸಪ್ತಕ್ಕೆ ಬದಲಾಗಿ) ದಶ ಮತ್ತು ಶತ ಎಂಬ ಶಬ್ದಗಳನ್ನು ಉಪಯೋಗಿಸ ಲಾಗಿದೆ. ಇವೆಲ್ಲಾ ಇಂಡೋ ಯೂರೋಪಿಯನ್ ಶಬ್ದಗಳೇ. ಇಷ್ಟಲ್ಲದೇ **ಶಕ, ಶದ, ಸಹ್, ಪಾ, ಪ್ವಾತ್** (ಪಾತ್), **ರಾ, ದಾ, ಭಗ, ಮಹಾ, ಪಕ** ಮೊದಲಾದ ಶಬ್ದಗಳನ್ನು ವೇದಕಾಲೀನ ಸಂಸ್ಕೃತ ಭಾಷೆಯಲ್ಲಿ ಉಪಯೋಗಿಸಿದ ಅರ್ಥದಲ್ಲಿ ಸಿಂಧು ಶಾಸನಗಳಲ್ಲಿ ಉಪಯೋಗಿಸಲಾಗಿದೆ. ಉದಾ. : **ಶಕ**=ಬಲಿಷ್ಠ ; **ಶದ**= ಶೂರ ಅಥವಾ ಸಹ=ಜಯಶಾಲಿ ; **ಪಾ**=ಕಾಪಾಡು, **ಪಾಕ್**=ರಕ್ಷಿಸು, **ರಾ**= ಕೊಡು, **ದಾ**=ದಾನಮಾಡು, **ಭಗ**=ದಯಾಳು, ದೇವರು, ಸ್ವಾಮಿ. **ಮಹಾ**= ಶ್ರೇಷ್ಠ ; **ಪಕ**=ರಕ್ಷಕ, **ಅಪ್**/**ಅಪ**=ನೀರು ; **ಭಾ**=ಪ್ರಕಾಶಿಸು ಇತ್ಯಾದಿ. ಸಂಸ್ಕೃತ ಹಾಗೂ ಅವೆಸ್ತ ಮೊದಲಾದ ಇಂಡೋ ಯೂರೋಪಿಯನ್ ಭಾಷೆ ಗಳಲ್ಲಿರುವ ಕೆಲವು ಪ್ರತ್ಯಯಗಳಾದ **ಆ**=ಇಂದ, **ಏ**=ಗೆ, **ಅಹ್** ಅಥವಾ **ಹ** (**ಅಸ್** ಅಥವಾ **ಸ**)=ನ/ರ ಇವುಗಳನ್ನು ಕ್ರಮವಾಗಿ ತೃತೀಯಾ, ಚತುರ್ಥಿ ಹಾಗೂ ಷಷ್ಠಿ ವಿಭಕ್ತಿ ಪ್ರತ್ಯಯಗಳಾಗಿ ಸಿಂಧು ಭಾಷೆಯಲ್ಲಿ ಉಪಯೋಗಿಸಿರುವುದಲ್ಲದೆ ಸಮಾಸವನ್ನು ಕೂಡ ಈ ಭಾಷೆಯಲ್ಲಿ ನೋಡಬಹುದು. ಶಾಸನಗಳನ್ನು ಓದುವ ಕೊನೆಯ ಹಂತದಲ್ಲಿ ಪಕ್ಷಿ, ಚೇಳು ಮೊದಲಾದ ಚಿತ್ರಗಳಿಗೆ ಪ್ರಾಚೀನ ಇಂಡೋ ಆರ್ಯನ್ ಭಾಷೆಯಲ್ಲಿರುವ ಶಬ್ದಗಳ ಆಧಾರದ ಮೇಲೆ ಶಬ್ದ (Syllabic) ಮೌಲ್ಯ ಕೊಡಲಾಯಿತು. ಸಿಂಧು ಭಾಷೆ ಪ್ರಾಚೀನ ಸಂಸ್ಕೃತ ಭಾಷೆ ಎನ್ನುವುದಕ್ಕೆ ಚಿತ್ರ 3ರಲ್ಲಿ ಕೊಟ್ಟಿರುವ ಕೆಲವು ಶಾಸನಗಳ ಅರ್ಥದಿಂದ ತಿಳಿಯಬಹುದು.

**ಶಾಸನಗಳ ಭಾವಾರ್ಥ** (ಚಿತ್ರ 3) (**ಎಡಪಾರ್ಶ್ವ ; ಮೇಲಿನಿಂದ ಕೆಳಕ್ಕೆ**)

1. **ಮಖ ದೃಕ (ದೃಹ) ಶಕ್ಕ**=ಉದಾರಿ, ದೃಹ ಬಲಶಾಲಿ (ಉದಾರಿ ಹಾಗೂ ಬಲಿಷ್ಠ ದೃಹು ಎಂಬ ಜನರು ಅಥವಾ ರಾಜ)
2. **ತ್ರಾ ವೃಷ**=ರಕ್ಷಕ, ಬಲಿಷ್ಠ.
3. **ಭದ್ರಮ ದ್ವಾಪ್ವ** (ದ್ವಪ)=ಅತ್ಯಂತ ಶುಭ ಸೂಚಕ ದ್ವೀಪ.

1. **ಏಕೇಕ ತ್ರದ**=ಏಕೈಕ ರಕ್ಷಕ.
2. **ತೃಪ್ತರ್ಕ** (ಅರ್ಕ)=ತೃಪ್ತಿಗೊಂಡ ಅರ್ಕ (ಅಗ್ನಿ).

1. **ಸಹ್‌ಪತ್** (ಅಥವಾ **ಪಾತ್**)=ಜಯಶಾಲಿ ಒಡೆಯ (ಪತಿ ಎಂಬರ್ಥದಲ್ಲಿ).

1. **ಭಗ ದ್ರಹ**=ದಯಾಳು (ಅಥವಾ ಸ್ವಾಮಿ) ದೃಹ.
2. **ಪ "ಪವ್ ಶಕ ತ್ರಹ್ದಕ=ರಕ್ಷಕ"** ಶುಭ್ರ ಹಾಗೂ ಬಲಶಾಲಿ (ತ್ರಹ್=ಸೀಳು) (ಶತ್ರುಗಳನ್ನು) ಸೀಳುವವನು.
3. **ಪಾತ್ ಹ**=ಒಡೆಯನ (ಮುದ್ರೆ).

(ಬಲಪಾರ್ಶ್ವ ; ಮೇಲಿನಿಂದ ಕೆಳಕ್ಕೆ)

1. **ದಶ ದ**=ಹತ್ತು ಕೊಡುವವನು (ಹತ್ತರಷ್ಟು ಕೊಡುವವನು).
2. **ಪ "ಶದ=ರಕ್ಷಕ"** ಬಲಶಾಲಿ.
3. **ಪ–"ಪಪ್ರ=ರಕ್ಷಕ"** ಪಪ್ರ (ಪಪ್ರ=ರಕ್ಷಿಸುವವನು).
4. **ಪಕೇ-ಬಕಾ**=ಕಾಪಾಡುವವನಿಗೆ ಬಕನಿಂದ (ಬಕ=ಬಗ=ದೇವರು : ಅಥವಾ ಬಕದಾಲ್ಭ್ಯನೆಂಬ (ಋಷಿ)–(ಈ ಸರಕು) ಬಕ (ಋಷಿ) ಯಿಂದ ರಕ್ಷಕನಿಗೆ ಎಂಬರ್ಥದಲ್ಲಿ.
5. **ಪೇ ದ್ಯು ಶತಹ ಪಾ**=ದಿವ್ಯ (ದ್ಯು). ರಕ್ಷಕನಿಗೆ (ಪೇ=ಪ+ಏ) ನೂರು ರಕ್ಷಕರಿಂದ (ನೂರು ಗ್ರಾಮಗಳ ರಕ್ಷಕ ?).

**ಸಿಂಧು ಮುದ್ರೆ ಶಾಸನಗಳಲ್ಲಿರುವುದೇನು ?**

ಕೆಲವು ಮುದ್ರೆಗಳ ಮೇಲೆ ಕೇವಲ **ಕ** 'ಪ್ರಜಾಪತಿ'. **ಗ**=ಬೃಹಸ್ಪತಿ, **ನನಾ** 'ಮಾತೃ(ದೇವತೆ)' ಎಂಬ ದೇವತೆಗಳ ಹೆಸರುಗಳಿವೆ. ಇನ್ನಿತರ ಮುದ್ರೆಗಳ ಮೇಲೆ **ಕಶಪ** (ಕಶ್ಯಪ) **ಅತ್ರಿ, ಸಸ, ಶರ, ಬಕ,** ಇತ್ಯಾದಿ ಹೆಸರುಗಳು ಋಗ್ವೇದದಲ್ಲಿ ಋಷಿಗಳ ಹೆಸರುಗಳಾಗಿ ಉಲ್ಲೇಖಗೊಂಡಿವೆ. ದ್ವಪ್ಪ (ದ್ವ+ಅಪ) ಎಂದು ಎರಡು ನದಿಗಳ ನಡುವಣ ಪ್ರದೇಶಕ್ಕೆ ಹೆಸರಿತ್ತೆಂದು ತೋರುತ್ತದೆ. ಏಕದ್ವಪ್ಪ. ಪಂಕ. (ಪಂಚ) ದ್ವಪ್ಪ. ಹತ್ತದ್ವಪ್ಪ ಮೊದಲಾದವು ಪ್ರದೇಶಗಳ ಹೆಸರಿರಬಹುದು.

ಸಿಂಧು ಸಂಸ್ಕೃತಿಯ ಜನರು ಅಗ್ನಿ ಆರಾಧಕರು. ಒಂದು ಮುದ್ರೆಯ ಮೇಲೆ ಈ ದೇವತೆಯನ್ನು ಅಗ್ನಿಜ್ವಾಲೆಯ ಕಮಾನಿನ ನಡುವೆ ಚಿತ್ರಿಸಿ ಶಾಸನವನ್ನು ಕೆತ್ತಿರುವರು (ಚಿತ್ರ 4). ಆ ಶಾಸನದಲ್ಲಿ **ಭಗ ಅರ್ಕ** ಎಂದು ಬರೆದಿರುವುದರಿಂದ ಅಗ್ನಿ ದೇವತೆಯೇ ಆ ಚಿತ್ರದಲ್ಲಿರುವುದೆಂದು ಧಾರಾಳವಾಗಿ ಹೇಳಬಹುದು. ಇಷ್ಟಲ್ಲದೆ ಆ ದೇವತೆ ಅಗ್ನಿಜ್ವಾಲೆಯಿಂದ ಅಲಂಕರಿಸಿರುವುದನ್ನು ನೋಡಿದರೆ ಅಗ್ನಿಯನ್ನು ಋಗ್ವೇದದಲ್ಲಿ **ಭಾ ಋ ಜೀ ಕಂ** ಎಂದು ಕರೆದಿರುವುದು ಸಿಂಧು ಮುದ್ರೆಗಳ ಆಧಾರದ ಮೇಲೆ ಎಂದು ಹೇಳಬಹುದು. ಇನ್ನೊಂದು ಮುದ್ರೆಯ ಮೇಲೆ ಅಗ್ನಿಜ್ವಾಲೆಯ (ಸ್ತಂಭದಂತಿರುವ) ಚಿತ್ರವಿದೆ. ಈ ಮುದ್ರೆಯ ಮೇಲೆ **ಪಗ–ಭಗ–ಅರ್ಕ–ಹ** "ಶಕ್ತಿಮಾನನಾದ (**ಪಾಜಸ್** ನಿಂದ **ಪಗ** ಬಂದಿದೆ.) ಅರ್ಕ (ಅಗ್ನಿ) ದೇವನ (ಮುದ್ರೆ)" ಎಂದು ಅರ್ಥಕೊಡುವ ಶಾಸನ ಬರೆಯಲಾಗಿದೆ (ಚಿತ್ರ 5). ಚರ್ಚಾಸ್ಪದವಾದ ಮೊಹೆಂಜೋದಾರೊ ಮುದ್ರೆಯ ಮೇಲಿರುವ ತ್ರಿಮೂರ್ತಿಯನ್ನು (ಚಿತ್ರ 6) ಕೆಲವರು ರುದ್ರ. ಪಶುಪತಿ ಎಂದು ಭಾವಿಸಿರುವರು. ಆದರೆ ಸಪ್ತ ರಶ್ಮಿ ಯುವಕನಾದ

ಈ ದೇವತೆ ಕೂಡ ಅಗ್ನಿಯು ಮೂರು ರೂಪಗಳನ್ನು ಸೂಚಿಸುತ್ತದೆ. **ರಮು ತ್ರಿ ಧಾ ಓ ಪಾ** "ಮೂರು ವಿಧವಾಗಿ ಪ್ರಜ್ವಲಿಸುವವನು ಮತ್ತು ನಲಿಯುವವನು" ಎಂಬ ಅರ್ಥವುಳ್ಳ ಶಾಸನ ಅಗ್ನಿಗೆ ಅನ್ವಯಿಸುತ್ತದೆ. ಈ ದೇವತೆ ಸುತ್ತಲಿರುವ ಪಶುಗಳು ಬೇರೆ ಬೇರೆ ಪಂಗಡಗಳ ದೇವತೆಗಳಾದುದಕ್ಕೆ ಹುಲಿ ಮತ್ತು ಆನೆಗೆ ಕೂಡಾ ಶೃಂಗ ಗಳನ್ನು ಬೇರೆ ಮುದ್ರೆಗಳಲ್ಲಿ ತೋರಿಸಲಾಗಿದೆ. ಎಲ್ಲಾ ಗುಂಪಿನವರು ಅಗ್ನಿಯೇ ಪ್ರಾಧಾನ್ಯ ದೇವತೆ ಎಂದು ಒಪ್ಪಿರುವುದನ್ನು ಈ ಪ್ರಾಣಿಗಳು ಸೂಚಿಸುತ್ತವೆ. ಈ ಕಾರಣದಿಂದಲೇ ಋಗ್ವೇದದಲ್ಲಿ ಅಗ್ನಿಯನ್ನು ಪಶುಪತಿ ಎಂದು ಕರೆದಿರಬಹುದು.

ಕೆಲವು ಮುದ್ರೆಗಳ ಶಾಸನಗಳಲ್ಲಿ ಉಲ್ಲೇಖಿಸಿರುವ ಕಶ್ಯಪ, ಸಸ, ಶರ ಮೊದಲಾದ ಹೆಸರುಗಳು ವೇದಗಳ ಕಾಲದಲ್ಲಿ ಕಶ್ಯಪ, ಅತ್ರಿ. ಬಕದಾಲ್ಭ್ಯ, ಸಸ (ಆತ್ರೇಯ) ಶರ (ಋಚತ್ಕನ ವಂಶಜ) ಮೊದಲಾದ ಋಷಿಗಳಾಗಿ ಪ್ರಖ್ಯಾತರಾಗಿರುವಂತೆ ಕಂಡು ಬರುತ್ತದೆ.

ಸಿಂಧು ಜನರು ಯಜ್ಞ ಯಾಗಾದಿಗಳನ್ನು ಮಾಡುತಿದ್ದುದು ಅಲ್ಲಿ ಯಜ್ಞಕುಂಡ ಗಳಿಂದ ಪರಿಚಯವಾಗುತ್ತದೆ. ಕೆಲವು ಮುದ್ರೆಗಳ ಮೇಲೆ **ಏಕಾಹ, ಪಂಕಾಹ (ಪಂಚಾಹ), ಹಪ್ತಾಹ,** (ಸಪ್ತಾಹ) ಇತ್ಯಾದಿ ಸತ್ರಗಳ ಹೆಸರುಗಳನ್ನು ಕೆತ್ತಿರು ವಂತಿದೆ. ಅಶ್ವಸತ್ರ ಎಂದರೆ ಅಶ್ವಮೇಧ ಯಜ್ಞವಿರಬಹುದು. ಅಶ್ವದ ಅಸ್ಥಿಗಳು ಸಿಂಧು ಸಂಸ್ಕೃತಿಯ ಪಟ್ಟಣ (ಲೋಥಲ್ ಮತ್ತು ಸುರ್‌ಕೋಟಡ್) ಗಳಲ್ಲಿ ದೊರಕು ವುದರಿಂದ ಅಲ್ಲಿಯ ಜನರು ಅಶ್ವಗಳನ್ನು ಉಪಯೋಗಿಸುತ್ತಿದ್ದರೆಂದು ಹೇಳಬಹುದು.

ಇನ್ನೂ ಕೆಲವು ಮುದ್ರೆಗಳ ಮೇಲೆ ಸಿಂಧು ಸಂಸ್ಕೃತಿಯ ಜನರು ರಫ್ತು ಮಾಡುತ್ತಿದ್ದ ಸರಕುಗಳನ್ನು ನಮೂದಿಸಲಾಗಿದೆ. ಉದಾ. : ಅಕಕ್ (ಕೆಂಪು ಕಲ್ಲು–Carnelian). ತಸರ (ಮಗ್ಗದ ಬಟ್ಟೆ). ತ್ರಪು (ತವರ) ಇತ್ಯಾದಿ. ಕೆಲವು ಮಾದರಿಯ ದೋಣಿಗಳು ಇದ್ದುದಕ್ಕೆ ತ್ರಪಗ ಇತ್ಯಾದಿ ಹೆಸರುಗಳೇ ಸಾಕ್ಷಿ.

ಸಿಂಧು ಸಂಸ್ಕೃತಿಯ ಆಡಳಿತದಲ್ಲಿ ಗ್ರಾಮದ ಮಟ್ಟದಲ್ಲಿದ್ದ ಅಧಿಕಾರಿಗೆ **ಪಕ**, ನಗರ ಅಥವಾ ಪ್ರಾಂತ್ಯದ ಮಟ್ಟದಲ್ಲಿದ್ದವನಿಗೆ **ಪಾ. ಪತ** (ಪಕಿ) (ರಕ್ಷಕ, ಒಡೆಯ), ಶಾಸ (ಶಾಸಕ) ಎಂದೂ ಮತ್ತು ಇವರ ಮೇಲಿರುವ ಅತ್ಯುನ್ನತ ರಾಜಾಧಿರಾಜನಿಗೆ **ಶಾಸ**–ಶಾಸನೆಂದು ಕರೆಯುತಿದ್ದರೆಂದು ಶಾಸನಗಳ ಆಧಾರದ ಮೇಲೆ ಹೇಳಬಹುದು. ಆದರೆ ರಾಜನಿಗೂ ದೇವತೆಗೂ ಒಂದೇ ಬಗೆಯ ಬಿರುದು ಇದ್ದಿರಬಹುದು. ಉದಾ. : **ಶಕ, ಶದ, ಪವ, ದ್ಯೌ** ಇತ್ಯಾದಿ. ಒಂದು ಮುದ್ರೆಯ ಮೇಲೆ (ಚಿತ್ರ 6) **ಪ "ಶ–ಕ್ಕ–ಅ=ಪ" ಶಕ್ಕ** 'ರಕ್ಷಕ' 'ಬಲಿಷ್ಠ' ಎಂದೂ ಇನ್ನೊಂದು ಮುದ್ರೆಯ ಮೇಲೆ (ಚಿತ್ರ 7) **ಪಹ್–ಪಹ್–ಹಾ** ಎಂದರೆ "ರಾಜಾಧಿರಾಜನ ಮುದ್ರೆ" (ಪಹ್='ಕಾಪಾಡು' ಎಂದು ಹಿಟ್ಟೈಟ್ ಭಾಷೆಯಲ್ಲಿ).

ಸಿಂಧು ಜನರ (ಹರಪ್ಪನ್ನರ) ಭಾಷೆ, ಸಂಸ್ಕೃತಿ, ಧಾರ್ಮಿಕ ಮತ್ತು ಆರ್ಥಿಕ ವ್ಯವಹಾರಗಳನ್ನು ಕೂಲಂಕಷವಾಗಿ ವಿಚಾರಿಸಿದ್ದಲ್ಲಿ ಇವರು ಆರ್ಯರ ಭಾಷೆಯನ್ನು

ಮಾತನಾಡುತ್ತಿದ್ದುದಷ್ಟಲ್ಲದೇ ವೈದಿಕ ಧರ್ಮಕ್ಕೆ ತಳಹದಿ ಹಾಕಿರುವರೆಂದು ಹೇ
ಬಹುದು. ಹರಪ್ಪ, ಮೊಹೆಂಜೊದಾರೋ, ಲೋಥಲ್ ಮೊದಲಾದ ನಗರಗಳ
ಬಹುಮಟ್ಟಿಗೆ ಪ್ರವಾಹದ ಹಾವಳಿಯಿಂದ ನಾಶವಾದ ನಂತರ ಅಲ್ಲಿಯ ಜನರು
ಗುಜರಾತ್‌ನಲ್ಲಿಯೂ. ಸರಸ್ವತೀ ಯಮುನಾ ನದಿಗಳ ದಂಡೆ (ರಾಜಸ್ಥಾನ,
ಹರಿಯಾಣ) ಮೇಲೂ ವಸತಿಗಳನ್ನು ಕಟ್ಟಿದರು. ಕೆಲವರು ಸಿಂಧ್ ಪ್ರಾಂತ್ಯದ
ಪೂರ್ವಭಾಗಕ್ಕೆ ತೆರಳಿದರು. ಇತ್ತೀಚೆಗೆ ಅಂತ್ಯ ಹರಪ್ಪನ್ನರೆಂದು ಕರೆಯಲ್ಪಡುವ
ಈ ಜನರ 200 ವಸತಿಗಳು ಗುಜರಾತಿನಲ್ಲಿಯೂ ಸುಮಾರು 300 ವಸತಿಗಳು
ಬಹವಲ್‌ಪುರ (ಪಾಕಿಸ್ಥಾನ) ಜಿಲ್ಲೆಯಲ್ಲೂ 250ಕ್ಕೂ ಮೇಲ್ಪಟ್ಟು ಹರಿಯಾಣ,
ಪಂಜಾಬ್, ಉತ್ತರ ಪ್ರದೇಶದಲ್ಲೂ ದೊರಕಿವೆ. ಈ ಜನರು ವೇದಕಾಲೀನ ಆರ್ಯ
ರಿಗೂ ಹೆಚ್ಚು ವ್ಯತ್ಯಾಸ ಕಂಡುಬರುವುದಿಲ್ಲ. ಈ ಪ್ರದೇಶಗಳ ಮೂಲವಾಸಿಗಳನ್ನು
ಇವರು ರಾಸ, ದಸ್ಯುಗಳೆಂದು ಕರೆದಿರಬಹುದು.

---

# ಹರಿಕಥೆಯ ಜನ್ಮಭೂಮಿ

ಡಾ॥ ಆರ್ವಿಯಸ್

ಹರಿಕಥೆಯ ಉಗಮದ ಬಗೆಗೆ ಡಾ॥ ಎಂ. ಚಿದಾನಂದಮೂರ್ತಿ ಅವರ ಸಂಶೋಧನಾತ್ಮಕ ಲೇಖನ (ಲೋಚನ ೧–೧) ಈ ಕ್ಷೇತ್ರದ ಮೇಲೆ ಹೊಸ ಬೆಳಕನ್ನು ಚೆಲ್ಲುತ್ತದೆ. ಮರಾಠಿ ಮೂಲವನ್ನು ಅಲ್ಲಗಳೆಯುವುದರಲ್ಲಿ ಡಾ॥ ಚಿದಾನಂದಮೂರ್ತಿ ಅವರು ಯಶಸ್ವಿಯಾದರಾದರೂ, ಇನ್ನೂ ಕೆಲವು ಪ್ರಶ್ನೆಗಳು ಹಾಗೆಯೇ ಉಳಿದಿವೆ.

ಮೊದಲು ಡಾ॥ ಚಿದಾನಂದಮೂರ್ತಿ ಅವರ ವಾದದಲ್ಲಿ ಭಿನ್ನಾಭಿಪ್ರಾಯಕ್ಕೆ ಅವಕಾಶ ನೀಡುವ ಸಂದರ್ಭಗಳನ್ನು ಪ್ರಸ್ತಾಪಿಸುತ್ತೇನೆ. ತೆಲುಗು, ತಮಿಳುಗಳಲ್ಲಿ ಹರಿಕಥೆಯ ಬಗ್ಗೆ ಯಾವುದೇ ಪ್ರಾಚೀನ ಉಲ್ಲೇಖವೂ ದೊರಕುವುದಿಲ್ಲವೆಂಬುದೇನೋ ನಿಜ. ಆದರೆ ಉಲ್ಲೇಖಗಳಿಂದಲೇ ಒಂದು ಕಲೆಯ ಅಸ್ತಿತ್ವವನ್ನಾಗಲಿ. ಉಗಮವನ್ನಾಗಲಿ. ನಿರ್ಧರಿಸಿಬಿಡುವುದೂ ಸರ್ವಕಾಲಗಳಲ್ಲಿಯೂ ಸೂಕ್ತವಲ್ಲ. ದಕ್ಷಿಣ ಭಾರತದಲ್ಲಿ, ಅದರಲ್ಲೂ ಆಂಧ್ರ ಮತ್ತು ಕರ್ನಾಟಕಗಳ ನಡುವೆ ಇತಿಹಾಸ ಪೂರ್ವ ಯುಗಗಳಿಂದಲೂ ಆದಾನ ಪ್ರದಾನಗಳು ನಡೆದಿವೆ. ಇಂದಿನ ಭೌಗೋಳಿಕ. ಸಾಂಸ್ಕೃತಿಕ ಹಾಗೂ ಸಾಮಾಜಿಕ ಮೌಲ್ಯಗಳನ್ನೇ ಆಧಾರವಾಗಿಟ್ಟುಕೊಂಡು ಕೆಲವು ಶತಮಾನಗಳ ಹಿಂದಿನ ಕಲಾರೂಪಗಳನ್ನು ನಮ್ಮವೇ ಎಂದು ನಿರ್ಧರಿಸುವಾಗ ತುಂಬ ಗಂಭೀರವಾಗಿ ಯೋಚಿಸಬೇಕಾಗುತ್ತದೆ. ಹರಿದಾಸ ಚಳುವಳಿ ಕರ್ನಾಟಕದಲ್ಲೇ ಒಂದು ದೊಡ್ಡ ಸಾಂಸ್ಕೃತಿಕ ಘಟನೆಯಾಗಿ ರೂಪುಗೊಂಡಿತ್ತೆಂಬುದು ನಿಜ. ಆದರೆ ಅದಕ್ಕೂ ಹಿಂದೆ ಬೇರೆಡೆಗಳಲ್ಲಿ ವೈಷ್ಣವ ಚಳುವಳಿ ಇರಲಿಲ್ಲವೇ ? ಹರಿಕಥೆಯ ಉಗಮಕ್ಕೆ ಬೇಕಾಗಿದ್ದ ಸಾಧನ ಸಾಮಗ್ರಿಗಳೆಲ್ಲಾ ದಕ್ಷಿಣ ಭಾರತದ ಬೇರೆ ಕಡೆಗಳಲ್ಲೂ ಪ್ರಚಲಿತವಾಗಿರಲಿಲ್ಲವೇ ? ಹರಿದಾಸ ಚಳುವಳಿ ಹರಿಕಥಾ ಪ್ರಕಾರವನ್ನು ತನಗೆ ಪೋಷಕವಾಗಿ ಸ್ವೀಕರಿಸಿರಬಹುದು. ಈ ಸ್ವೀಕಾರ ಬೇರೆ ಕಡೆಯಿಂದ ಆಗಿರಲೂ ಸಾಧ್ಯ. ಚಳುವಳಿಗಳೇ ಕಲಾಪ್ರಕಾರಗಳನ್ನು ಸೃಷ್ಟಿ ಮಾಡುತ್ತವೆ ಎನ್ನುವುದಕ್ಕಿಂತ. ಕಲಾಪ್ರಕಾರಗಳ ನೆರವನ್ನು ಪಡೆಯುತ್ತವೆ ಎಂಬುದರಲ್ಲೇ ಹೆಚ್ಚು ಸತ್ಯವಿದೆ ಎನಿಸುತ್ತದೆ.

ಧೂಳಿಪಾಳ ಕೃಷ್ಣಕವಿ (ಕ್ರಿ.ಶ. 1809–99) ಆಂಧ್ರದ ಮೊದಲ ಹರಿಕಥಾ ದಾಸರೆಂದು ಹೇಳಿದವರು ಆದಿಭಟ್ಟ ನಾರಾಯಣದಾಸರು ಮಾತ್ರ. ಇದನ್ನು ಅಲ್ಲಗಳೆದು ಅವರಿಗಿಂತ ಹಿಂದೆಯೇ ಅನೇಕ ಹರಿಕಥೆಗಳಿದ್ದವೆಂಬುದನ್ನು ಡಾ॥ ಟಿ. ದೊಣಪ್ಪ ಅವರು ಸ್ಪಷ್ಟವಾಗಿ ತೋರಿಸಿಕೊಟ್ಟಿದ್ದಾರೆ.[1] ತೆಲುಗು ಹರಿಕಥೆ ಮಹಾರಾಷ್ಟ್ರದಿಂದಲೇ ಬಂತೆಂಬುದು ಡಾ॥ ದೊಣಪ್ಪ ಅವರ ಅಭಿಪ್ರಾಯವೆಂಬಂತೆ ಡಾ॥ ಚಿದಾನಂದಮೂರ್ತಿ

---

1. **'ತೆಲುಗು ಹರಿಕಥಾ ಸರ್ವಸ್ವಂ', ಗುಂಟೂರು** 1978, **ಪು**. 211.

ಅವರು ಬರೆದಿರುವುದು (ಲೋಚನ ೧-೧ ಪು. 38) ಸೂಕ್ತವಲ್ಲ. ಡಾ॥ ದೊಣಪ
ಅವರು ತೆಲುಗು ಹರಿಕಥೆಯ ಎಲ್ಲ ಯೋಗಾಂಗಗಳನ್ನೂ ಸೂಕ್ಷ್ಮವಾಗಿ ಪರಿಶೀಲಿಸಿ
ತೆಲುಗು ಹರಿಕಥೆ ಮರಾಠಿ ಮೂಲದ್ದಲ್ಲ ಎಂಬುದನ್ನು ಸ್ಪಷ್ಟಪಡಿಸಿದ್ದಾರೆ.[2] ತಮಿಳ
ನಾಡಿನ ಹರಿಕಥೆ ಇತ್ತೀಚಿನದೆಂದು ಹೇಳುತ್ತಾರೆ. ಅದರ ಬಗ್ಗೆ ಹೆಚ್ಚಿನ ವಿವರಗಳ
ತಿಳಿಯವು. ಮರಾಠಿ, ಕನ್ನಡ ಮತ್ತು ತೆಲುಗು ಮೂಲಗಳ ಬಗ್ಗೆ ಕೆಲವು ವಿವ
ಗಳನ್ನು ಇಲ್ಲಿ ಕೊಡಬಹುದು.

**ಮರಾಠಿ ಮೂಲ :** ಮರಾಠಿ ವಿದ್ವಾಂಸರು ಸಂತ ನಾಮದೇವ (ಕ್ರಿ.ಶ.1200
1350)ನೇ ಮೊದಲ ಕೀರ್ತನಕಾರನೆಂದು ನಂಬುತ್ತಾರೆ. ಆದರೆ ಅಷ್ಟು ಹಿಂದಿ
ಮರಾಠಿ ಭಕ್ತಿ ಸಾಹಿತ್ಯದಲ್ಲಿ ಎಲ್ಲೂ ಹರಿಕಥೆ ಒಂದು ಕಲಾರೂಪವಾಗಿ ಉಲ್ಲಿಖಿ
ವಾಗಿಲ್ಲ. ಮರಾಠಿ ಸಾಹಿತ್ಯದಲ್ಲಿ ಕೀರ್ತನ ಎಂಬ ಹೆಸರು ಬಂದ ಕಡೆ ಎಲ
ಸಾಮಾನ್ಯಾರ್ಥವೇ ಹೊರತು ವಿಶಿಷ್ಟಾರ್ಥವಿಲ್ಲ ಎಂದು ಡಾ॥ ಚಿದಾನಂದಮೂರ್ತಿ
ಅವರು ಸ್ಪಷ್ಟಪಡಿಸಿದ್ದಾರೆ ('ಲೋಚನ' ಪು. 38).

ಮರಾಠಿ ಸಂಪ್ರದಾಯದ 'ಕೆಲವು' ಅಂಶಗಳು ಕನ್ನಡ ಮತ್ತು ತೆಲುಗ
ಹರಿಕಥೆಗಳಲ್ಲಿ ಸೇರ್ಪಡೆಯಾಗಿರುವುದನ್ನು ಹರಿಕಥಾದಾಸರು ಹಾಗೂ ವಿದ್ವಾಂಸರ
ಒಪ್ಪಿಕೊಂಡಿದ್ದಾರೆ. ಮಹಾರಾಷ್ಟ್ರ ಸಂಗೀತ ಸಂಪ್ರದಾಯದ ಅಭಂಗ, ನಿರೂಪಣ
ದೋಹರಾ, ಓವಿ, ನಾಮಾವಳೀ ಮುಂತಾದುವು ದಾಕ್ಷಿಣಾತ್ಯ ಹರಿಕಥಾ ಸಂಪ್ರದಾಯ
ಗಳಲ್ಲಿ ಸೇರ್ಪಡೆಯಾಗಿವೆ. ಹರಿಕಥಾ ದಾಸರ ವೇಷ ಕನ್ನಡ ಹರಿದಾಸರ ವೇಷವೆ
ಆಗಿರುವುದನ್ನೂ ಡಾ॥ ಚಿದಾನಂದಮೂರ್ತಿ ಅವರು ತಮ್ಮ ವಾದಕ್ಕೆ ಪೋಷಕವಾ
ಸ್ವೀಕರಿಸಿದ್ದಾರೆ (ಪ್ರಜಾವಾಣಿ 4-9-1983, ಸಾಪ್ತಾಹಿಕ ಪುರವಣಿ). ಆದ
ಕರ್ನಾಟಕ ಹರಿದಾಸರಿಂದಲೇ ಸಂಗ್ರಹಿಸಿದ ಮಾಹಿತಿಗಳ ಪ್ರಕಾರ[3] ಕರ್ನಾಟಕದ
ನಾಲ್ಕೈದು ತರಹದ ವೇಷಧಾರಣೆಗಳಿವೆ. ಅದರಲ್ಲಿ ಮರಾಠಿ ಸಂಪ್ರದಾಯವೂ ಒಂದು

ಜೈಮಿನಿ ಭಾರತದ ಕಥೆಗಳಿಗೆ ಮಹಾರಾಷ್ಟ್ರದಲ್ಲಿರುವ ಪ್ರಚಾರ ನಮ್ಮಲ್ಲಿಲ್ಲ
ಜೈಮಿನಿಭಾರತ ಮಹಾರಾಷ್ಟ್ರ ಸಂಪ್ರದಾಯಕ್ಕೆ ಸೇರಿದ್ದೆಂದು ಭಾವಿಸಲಾಗಿದೆ. ಆದ
ಜೈಮಿನಿ ಭಾರತದ ಕಥೆಗಳಿಗೆ ಕರ್ನಾಟಕದಲ್ಲೂ. ಆಂಧ್ರದಲ್ಲೂ ತಕ್ಕಮಟ್ಟಿನ ಪ್ರಚಾ
ಇದೆ. ಮರಾಠಿ ಜನಪದ ಸಾಹಿತ್ಯದಲ್ಲಿ ಹೆಚ್ಚಾಗಿ ಪ್ರಚಾರ ಪಡೆದಿರುವ ಕೃಷ್ಣಗಾರುಡಿ
ಗರುಡ ಗರ್ವ ಹರಣ. ಭೀಮಾರ್ಜುನ ಗರ್ವಭಂಗ, ಮೂರೂವರೆ ವಜ್ರ ಮುಂತಾದ
ವನ್ನು ಕನ್ನಡಿಗರು, ತೆಲುಗರು ಕೂಡ ಸ್ವೀಕರಿಸಿದ್ದಾರೆ.[4]

---

2. ಅದೇ, 'ಹರಿಕಥ ಸ್ವರೂಪ ಸ್ವಭಾವಾಲು', 'ಪ್ರಯೋಗಾಂಗ ವಿವರಣ'
'ಸಂಗೀತಂ' ಮುಂತಾದ ಅಧ್ಯಾಯಗಳು.

3. ಡಾ॥ ಟ. ದೊಣಪ್ಪ 'ತೆಲುಗು ಹರಿಕಥಾಸರ್ವಸ್ವಂ', ಪು. 148.

4. ಸಂಗೀತ, ವೇಷಭೂಷಣಗಳು, ಕಥಾವಸ್ತು ಎಂಬ ಈ ಮೂರನ್ನೂ ದೃಷ್ಟಿ
ಯಲ್ಲಿಟ್ಟುಕೊಂಡು, ಡಾ॥ ಟ. ದೊಣಪ್ಪ ಅವರ ಜೊತೆಗೆ ಈ ಲೇಖಕನೂ ಕನ್ನಡ ಹರಿದಾಸ

ಕನ್ನಡ ಹರಿಕಥಾ ಸಂಗೀತ. ವೇಷಧಾರಣೆ ಮತ್ತು ಕಥಾವಸ್ತುಗಳ ಮೇಲೆ ಮರಾಠಿ ಪ್ರಭಾವವನ್ನು ಕುರಿತಾಗಲಿ. ಅಥವಾ ಪ್ರಭಾವವಿಲ್ಲ ಎಂಬ ವಿಷಯವನ್ನಾಗಲಿ ಯಾರೂ ಗಂಭೀರವಾಗಿ ಪರಿಗಣಿಸಿದಂತಿಲ್ಲ. ಡಾ॥ ಟಿ. ದೋಣಪ್ಪ ಅವರು ಮಾತ್ರ ತೆಲುಗು ಹರಿಕಥೆಗಳ ಮೇಲೆ ಸ್ವಲ್ಪಮಟ್ಟಿಗೆ ಮರಾಠಿ ಕಥೆಗಳ ಪ್ರಭಾವ ಆಗಿದೆ ಎಂಬುದನ್ನು ಒಪ್ಪಿಕೊಂಡು ಅದಕ್ಕೆ ಕಾರಣವನ್ನು ಚರ್ಚಿಸಿದ್ದಾರೆ.[5] ಮಹಾರಾಷ್ಟ್ರ ಕೀರ್ತನ ಸಂಪ್ರದಾಯದಲ್ಲಿ ಪ್ರಧಾನಾಂಗವಾದ ಪಂಚಪದಿಗೆ ತೆಲುಗು ಹರಿಕಥಾ-ಪ್ರಪಂಚದಲ್ಲಿ ಸ್ಥಾನವಿಲ್ಲವೆಂಬುದನ್ನು ಹೇಳಿ, ತೆಲುಗು ಹರಿಕಥೆಯ ಮೇಲೆ ಮರಾಠಿ ಪ್ರಭಾವ ತುಂಬ ಸೀಮಿತವಾದುದೆಂದು ಸ್ಪಷ್ಟಪಡಿಸಿದ್ದಾರೆ.[6]

**ಕರ್ನಾಟಕ ಮೂಲ :**

ಇದರ ಬಗ್ಗೆ ತುಂಬ ಗಂಭೀರವಾದ ವಿಷಯಗಳನ್ನು ವಿದ್ವಾಂಸರ ಮುಂದಿಟ್ಟವರು ಡಾ॥ ಚಿದಾನಂದಮೂರ್ತಿ. ಕರ್ನಾಟಕದ ಪ್ರಾಚೀನ ಶಾಸನಗಳಲ್ಲಿ ಪುರಾಣ ವಾಚನ, ಕಥಾಪ್ರಸಂಗಗಳ ಉಲ್ಲೇಖಗಳು ಬಂದಿರುವುದನ್ನು ಗುರುತಿಸಲಾಗಿದೆ. 'ಕಥಾಕಥನ ಪ್ರಸಂಗ'ದಂತಹ ಮಾತುಗಳನ್ನು ಹರಿಕಥೆಯ ಸೂಚಕಗಳೆಂದು ಭಾವಿಸಬಾರದೆಂದು ಡಾ॥ ಮೂರ್ತಿ ಅವರು ಹೇಳುತ್ತಾರೆ ('ಲೋಚನ', ಪು. 39) ಪುರಂದರದಾಸ ಮತ್ತು ಕನಕದಾಸರಲ್ಲಿ ಹರಿಕಥೆ ಕಲೆಯ ಸ್ಪಷ್ಟ ಉಲ್ಲೇಖಗಳಿವೆ ಎಂಬ ಮಾತನ್ನು ಒಪ್ಪಬಹುದು. "ವೈಷ್ಣವ ಸಂದರ್ಭದಲ್ಲಿ ಹರಿಕಥೆ ಹುಟ್ಟಿಕೊಂಡಿತೆಂಬುದು ಖಚಿತ. ಮತ್ತು ಅದು ಕರ್ನಾಟಕದ ಹರಿದಾಸರಲ್ಲಿ ಮೊತ್ತಮೊದಲು ಮೂಡಿತು ಎಂಬುದೂ ಬಹುಶಃ ಖಚಿತ" ('ಲೋಚನ' ಪು. 43) ಎಂಬ ಡಾ॥ ಮೂರ್ತಿ ಅವರ ನಿಲುವು ಒಪ್ಪತಕ್ಕದ್ದು. ಎರಡನೆಯ ವಾಕ್ಯದ 'ಬಹುಶಃ' ಎಂಬುದನ್ನು ಸಾರ್ಥಕ ಪದವೆಂದು ಪರಿಗಣಿಸಬೇಕು. ಇದರಿಂದ "ಕರ್ನಾಟಕದಲ್ಲಿ ಉಗಮಗೊಂಡ ಹರಿಕಥೆಯು ಮಹಾರಾಷ್ಟ್ರಕ್ಕೆ ಹೋಗಿ ಅಲ್ಲಿಂದ ಆಂಧ್ರಕ್ಕೆ. ತಮಿಳುನಾಡಿಗೆ, ತಮಿಳು ನಾಡಿನಿಂದ ಕೇರಳಕ್ಕೆ ಹೋದಂತೆ ತೋರುತ್ತದೆ" ('ಲೋಚನ', ಪು. 45) ಎಂಬ ಅಭಿಪ್ರಾಯವನ್ನು ಒಪ್ಪುವುದು ಕಷ್ಟ ಎನಿಸುತ್ತದೆ.

'ಹರಿಕಥೆ' ಎಂಬ ಪಾರಿಭಾಷಿಕ ಶಬ್ದ ಎಲ್ಲಿ ಮೊದಲು ಕಾಣಿಸಿಕೊಂಡಿದೆ ಎಂಬುದನ್ನೇ ಹರಿಕಥೆಯ ಉಗಮಕ್ಕೆ ಮುಖ್ಯಾಧಾರವಾಗಿ ಸ್ವೀಕರಿಸಬೇಕೇ ಎನ್ನುವುದರಲ್ಲಿ ಸಂಶಯವಿದೆ. ಹರಿಕಥೆ ಒಂದು ಕಲೆಯಾಗಿ ರೂಪುಗೊಳ್ಳಲು ಜನಪದ ಮಾಧ್ಯಮದ ಕೊಡುಗೆಯನ್ನು ಅಲ್ಲಗಳೆಯುವಂತಿಲ್ಲ. ಮೂಲ ಪ್ರಚೋದನೆ ನೀಡಿ

---

ರನ್ನು ಭೇಟಿಯಾದಾಗ, ಅನೇಕರು ಮರಾಠಿ ಮೂಲವನ್ನು ಪ್ರತಿಪಾದಿಸಿದ್ದರು. ಈ ಲೇಖಕ ಇನ್ನೂ ಕೆಲವರನ್ನು ಪ್ರತ್ಯೇಕವಾಗಿ ಭೇಟಿಯಾಗಿ ಸಂದರ್ಶನ ನಡೆಸಿದಾಗಲೂ ಇದೇ ಅಭಿಪ್ರಾಯ ವ್ಯಕ್ತವಾಯಿತು.

5. ಪೂರ್ವೋಕ್ತ, ಪು. 104–114.

6. ಪೂರ್ವೋಕ್ತ, ಪು. 109–110.

ತೆನ್ನಲಾದ ಜನಪದ ಮಾಧ್ಯಮ. ಹರಿಯ ಕಥೆಗಳಿಗೆ ಅಳವಡಿಸಿಕೊಂಡಾಗ ಪ್ರತ್ಯೇ
ಕಲೆಯಾಗಿ 'ಹರಿಕಥೆ' ಹುಟ್ಟಿತೆನ್ನುವುದನ್ನು ಒಪ್ಪುವುದಾದರೆ ತೆಲುಗುನಾಡಿನ
ಜನಪದ ಮಾಧ್ಯಮಗಳ ಕಡೆಗೂ ಗಮನ ಹರಿಸಬೇಕಾಗುವುದು.

**ತೆಲುಗು ಮೂಲ :**

ತೆಲುಗಿನಲ್ಲಿ ಈಗ ಇರುವ ಹರಿಕಥೆಯ ಪ್ರತಿಗಳನ್ನೇ ಪರಿಶೀಲಿಸಿ ಪ್ರಾಚೀನತಮ ಪ್ರತಿಯನ್ನು ಗುರುತಿಸುವ ಪ್ರಯತ್ನಗಳು ಮಾತ್ರ ನಡೆದಿದ್ದವು. ಈ ಕಾರಣದಿಂದಲೇ ಧೂಳಿಪಾಳ ಕೃಷ್ಣಕವಿ ಆಂಧ್ರದ ಮೊದಲ ಹರಿಕಥಾ ದಾಸರೆಂಬ ಅಭಿಪ್ರಾಯ ವ್ಯಕ್ತ ವಾಯಿತು. ಈ ದೃಷ್ಟಿಯಿಂದಲೇ ಕನ್ನಡ ಹರಿಕಥೆಗಳನ್ನೂ ಪರಿಶೀಲಿಸುವುದಾದರೆ 18ನೆಯ ಶತಮಾನಕ್ಕೆ ಹಿಂದಿನ ಹರಿಕಥೆಯನ್ನು ಗುರುತಿಸುವುದು ಕಷ್ಟವಾಗುತ್ತದೆ. ಶ್ರೀ ಬಿ. ರಜನೀಕಾಂತರಾವ್ ತೆಲುಗಿನ ಮೊದಲ ಹರಿಕಥೆ ಮುನಿಪಲ್ಲೆ ಸುಬ್ರಹ್ಮಣ್ಯ ಕವಿಯ 'ಅಧ್ಯಾತ್ಮ ರಾಮಾಯಣ'ವೆಂದಿದ್ದಾರೆ.[7] ಇದರ ಕಾಲ ಸು. ಕ್ರಿ.ಶ. 1760. ಮಹಾರಾಷ್ಟ್ರದ ಹರಿಕಥಾ ಸಂಪ್ರದಾಯ ಮಹಾರಾಷ್ಟ್ರ ರಾಜರ ಮೂಲಕ 18ನೆಯ ಶತಮಾನದಲ್ಲಿ ತಂಜಾವೂರಿಗೆ ಹೋಯಿತೆನ್ನಲು ಆಧಾರಗಳನ್ನು ಹೇಳ ಬಹುದು. ಆದರೆ ಅದು ಆಂಧ್ರಕ್ಕೆ ಬಂದುದಕ್ಕೆ ಯಾವ ಆಧಾರವೂ ಇಲ್ಲ. ತೆಲುಗು ಹರಿಕಥೆಯಲ್ಲಿ ತೆಲುಗು ಯಕ್ಷಗಾನದ ದರುವುಗಳು, ಕೀರ್ತನೆಗಳೇ ಹೆಚ್ಚಾ ಗಿರುವುದರಿಂದ ತೆಲುಗು ಯಕ್ಷಗಾನವೇ ಹರಿಕಥೆಗೆ ಮೂಲ ಎಂದು ಶ್ರೀ ರಜನೀ ಕಾಂತರಾವ್ ಅಭಿಪ್ರಾಯ ಪಟ್ಟಿದ್ದಾರೆ.[8] ಇದೇ ವಿಷಯವನ್ನೇ ಪ್ರಸ್ತಾಪಿಸುತ್ತಾ ಡಾ॥ ಟಿ. ದೊಣಪ್ಪ ಹರಿಕಥೆಯೇ ಯಕ್ಷಗಾನಕ್ಕೆ ಮೂಲವೆಂಬ ಅಭಿಪ್ರಾಯವನ್ನು ವ್ಯಕ್ತಪಡಿಸಿದ್ದಾರೆ.[9] ಹರಿಕಥೆಯೇ ಯಕ್ಷಗಾನಕ್ಕೆ ಮೂಲವೆಂಬ ಅಭಿಪ್ರಾಯವನ್ನು ಒಪ್ಪುವುದಾದರೆ ಅದರ ಕಾಲವನ್ನು ಸುಮಾರು ಕ್ರಿ. ಶ. 12–13 ಶತಮಾನಗಳಷ್ಟು ಹಿಂದಕ್ಕೆ ಒಯ್ಯಬೇಕಾಗುತ್ತದೆ. ಡಾ॥ ದೊಣಪ್ಪ ಅವರ ಈ ಅಭಿಪ್ರಾಯಕ್ಕೆ ಆಧಾರವೇನು ಎಂಬುದನ್ನು ಸ್ವಲ್ಪ ವಿಚಾರಿಸಬಹುದು. ಪುರಾಣ ಪ್ರವಚನ, ಭಜನೆ ಸಂಪ್ರದಾಯ, ವಾದ್ಯಗಳ ಬಳಕೆ, ಕಥನ, ಕುಣಿತ ಇವೆಲ್ಲ ಆಂಧ್ರದಲ್ಲಿ ಸುಮಾರು 10ನೆಯ ಶತಮಾನದಿಂದಲೂ ಇದ್ದುವೆಂಬುದಕ್ಕೆ ಶಾಸನಗಳು, ಕಾವ್ಯಗಳು ಆಧಾರ ವನ್ನು ನೀಡುತ್ತವೆ. ಯಕ್ಷಗಾನ ಒಂದು ಸಮಗ್ರ ಅಭಿನಯ ಕಲೆಯಾಗಿ ರೂಪು ಗೊಳ್ಳಲು ಇಂತಹ ಅನೇಕ ಕಲೆಗಳು ಸಮ್ಮಿಲನ ಹೊಂದಿರಬೇಕು. ಹರಿಕಥೆಗಿಂತ ಯಕ್ಷಗಾನ ಪರಿಷ್ಕೃತಕಲೆಯಾಗಿ ಕಂಡುಬರುವುದರಿಂದ (ಈ ಮಾತು ಶುದ್ಧ ಜನಪದ

---

7 ವಿ. ಸೀತಾರಾಮಾಂಜನೇಯ ಭಾಗವತಾರ್, 'ಆಂಧ್ರಹರಿಕಥಾವಾಙ್ಮಯಮು', ನೆಲ್ಲೂರು, 1976, ಪು. 1.

8. ಅದೇ, ಪು. 3.

9. ಪೂರ್ವೋಕ್ತ, ಪು. 114.

ಕಲೆಗಳಾದ ವೀಧಿ ಭಾಗವತಂ, ವೀಧಿ ನಾಟಕಂ ಮುಂತಾದವುಗಳಿಗೆ ಅನ್ವಯಿಸುವುದಿಲ್ಲ.) ಹರಿಕಥೆಯೇ ಪ್ರಾಚೀನವಿರಬಹುದು.

ಯಕ್ಷಗಾನ ತೆಲುಗುನಾಡಿನಲ್ಲಿ 15ನೆಯ ಶತಮಾನದ ಕಾಲಕ್ಕೆ ಕಲಾರೂಪವಾಗಿ ರೂಪುಗೊಂಡಿದ್ದಕ್ಕೆ ಸ್ಪಷ್ಟ ಆಧಾರಗಳಿವೆ. ಕೇಳಿಕೆಯಂತಹ ದೃಶ್ಯಪ್ರಕಾರಗಳೂ ಪಾಲ್ಕುರಿಕೆ ಸೋಮನಾಥನ ಕಾಲಕ್ಕೆ (13ನೆಯ ಶತಮಾನ) ಇದ್ದುವೆಂಬುದಕ್ಕೆ ಅವನ ಕಾವ್ಯಗಳಿಂದ ಉಲ್ಲೇಖಗಳು ಸಿಕ್ಕುತ್ತವೆ. ಹರಿಕಥೆ ಆ ಕಾಲಕ್ಕೆ ರೂಪುಗೊಂಡಿತ್ತೇ ಎನ್ನುವುದು ಮಾತ್ರ ಖಚಿತವಾಗಿ ನಿರ್ಧರಿಸಲಾಗದು. ಹೀಗಿರುವಾಗ ಮಹಾರಾಷ್ಟ್ರದ ಹರಿಕಥೆಗೆ ತೆಲುಗೇ ಮೂಲ ಎಂದು ಹೇಳಿಬಿಡುವುದೂ[10] ಸರಿಯೆನಿಸುವುದಿಲ್ಲ.

ಹರಿಕಥೆಗೂ ಯಕ್ಷಗಾನಕ್ಕೂ ಸಂಬಂಧವಿತ್ತು, ಸಂಬಂಧವಿದೆ ಎಂಬುದು ಪರಿಶೀಲನೆಯಿಂದ ಸ್ಪಷ್ಟವಾಗುತ್ತದೆ. ಯಕ್ಷಗಾನ ಮತ್ತು ಹರಿಕಥೆಗಳಲ್ಲಿ ಕಥಾನಿರೂಪಣೆ, ಸಂಗೀತ ಶೈಲಿ, ರಚನೆಗಳಲ್ಲಿ ಹೋಲಿಕೆಗಳಿವೆ. ಸಿದ್ಧೇಂದ್ರನ 'ಭಾಮಾಕಲಾಪ' "ಜನರೇ ಕೇಳೀ ಹರಿಕಥೆಯನ್ನು" ಎಂದು ಪ್ರಾರಂಭವಾಗುತ್ತದೆ. ಒಂದೇ ರಚನೆಯನ್ನು ಹರಿಕಥೆಯಾಗಿಯೂ, ಯಕ್ಷಗಾನವಾಗಿಯೂ, ತೊಗಲು ಗೊಂಬೆಯಾಟದ ವಸ್ತುವಾಗಿಯೂ ಉಪಯೋಗಿಸುವ ಸಂದರ್ಭಗಳಿವೆ. ಈ ಕಾರಣಗಳಿಂದ ಹರಿಕಥೆಗೆ ಆಂಧ್ರದಲ್ಲೂ ಕೆಲವು ಶತಮಾನಗಳ ಇತಿಹಾಸವಿದ್ದಿರಬೇಕೆಂದು ಊಹಿಸಬಹುದು.

ಹರಿಕಥೆ ರೂಪುಗೊಳ್ಳಲು ಕಾರಣವಾಗಿರಬಹುದಾದ ಕೆಲವು ಕಲೆಗಳು ಮತ್ತು 'ಹರಿಕಥೆ'ಯನ್ನು ಸೂಚಿಸುವ ಅಂಶಗಳು ಹೀಗಿವೆ :

1. 'ಭಾರತ ರಾಮಾಯಣಾದ್ಯನೇಕ ಪುರಾಣ ಪ್ರವೀಣಲುನು...' ನನ್ನಯ, ಆದಿ. 1–8, 11 ಶತ.
2. 'ಬ್ರಹ್ಮಾಂಡಾದಿ ನಾನಾ ಪುರಾಣ ವಿಜ್ಞಾನನಿರತು...' ಅದೇ: ಆದಿ. 1–9.
3. 'ಶ್ರೀ ಮಹಾಭಾರತ ರಾಮಾಯಣಾದಿ ಪುರಾಣ ಪಾರೀಣ ಪೌರಾಣಿಕುಲುನು' ಜಕ್ಕನ, 'ವಿಕ್ರಮಾರ್ಕ ಚರಿತ್ರೆ', 14 ಶತ.
4. ಪುರಾಣೇತಿಹಾಸ ಪ್ರಸಂಗಂಬುಲ ವಿನೋದಿಂಚು.' ಪಿತವೀರನ 'ಶೃಂಗಾರ ಶಾಕುಂತಲಮು', 15 ಶತ.
5. ಸಂಕೀರ್ತನ ಪದಕವಿತಾ ಪ್ರಪಿತಾಮಹನೆಂದು ಹೇಳಲಾದ ಸಿಂಹಗಿರಿ ಕೃಷ್ಣಮಾಚಾರ್ಯ (14 ನೆಯ ಶತ) ಬರೆದ ಸಂಕೀರ್ತನೆಗಳಿಗೆ ಸಿಂಹಗಿರಿ ವಚನ, ಸಿಂಹಗಿರಿ ವಿನ್ನಪ ಎಂದು ಹೆಸರು. ಇವನು ವೈಷ್ಣವ ಭಕ್ತ ಕವಿ. ಇವರು

---

10. ಪಿ. ವಿ. ಹನುಮಂತರಾವ್, ಶ್ರೀ ಕಾಳಹಸ್ತಿ ಮಾಹಾತ್ಮ್ಯವೆಂಬ ಹರಿಕಥೆಯ ಮುನ್ನುಡಿ, ಉಲ್ಲಿಖಿತ, ವಿ. ಸೀತಾರಾಮಾಂಜನೇಯ ಭಾಗವತಾರ್, ಪೂರ್ವೋಕ್ತ, ಪು. 3.

ಒಂದು ಸಂಕೀರ್ತನದಲ್ಲಿ 'ದಂಡೆ, ಚಿಟಿತಾಳ ಸಂಧಿಸಿಕೊಂಡು ನಾರಾಯಣನ ಕಥೆಗಳನ್ನು ದಂಡೆ ನುಡಿಸುತ್ತಾ ತಾಳ ಹಾಕುತ್ತಾ ಹೇಳಿದೆ' ಎಂದು ಬರೆದಿದ್ದಾರೆ.[11]

6. ಪೋತನನ ಭಾಗವತದಲ್ಲಿ ಶೌನಕಾದಿ ಮುನಿಗಳು ಸೂತಮಹಾಮುನಿಯನ್ನು 'ಹರಿಕಥೆಗಳನ್ನು ಹೇಳಿ' ಎಂದು ಕೇಳಿದರೆಂದಿದೆ. ಆದರೆ ಈ ಸಂದರ್ಭವನ್ನು ಪಾರಿಭಾಷಿಕವಾಗಿ ಸ್ವೀಕರಿಸಲು ಸಾಧ್ಯವಿಲ್ಲ.

ತೆಲುಗಿನ ವೈಷ್ಣವ ಸಾಹಿತ್ಯ 'ರಂಗನಾಥ ರಾಮಾಯಣ' (13 ಶತ) ದಿಂದ ಪ್ರಾರಂಭವಾಗುತ್ತದೆ. 'ರಂಗನಾಥ ರಾಮಾಯಣ' ದ್ವಿಪದಿ ಎಂಬ ತೆಲುಗು ದೇಶಿ ಛಂದಸ್ಸಿನಲ್ಲಿದೆ. ಇದರ ಭಾಗಗಳನ್ನೇ ತೊಗಲು ಗೊಂಬೆಯಾಟ, ಯಕ್ಷಗಾನ ಮತ್ತು ಹರಿಕಥೆಗಳಿಗೆ ಬಳಸಿಕೊಳ್ಳುವ ಸಂಪ್ರದಾಯ ಇದೆ. ತೆಲುಗಿನ ಭಜನ ಸಂಪ್ರದಾಯಕ್ಕೆ ಮೇಲೆ ಉದಾಹರಿಸಿದ ಸಿಂಹಗಿರಿ ಕೃಷ್ಣಮಾಚಾರ್ಯ (14ನೆಯ ಶತ) ಮೂಲಪುರುಷನೆನ್ನಲಾಗಿದೆ. ಅನ್ನಮಾಚಾರ್ಯ (15ನೆಯ ಶತ)ನ ಸಾವಿರಾರು ಕೀರ್ತನೆಗಳು ಜನಪದ ಧಾಟಿಯಲ್ಲೇ ಮೂಡಿಬಂದುವು. ಅನ್ನಮಯ್ಯ ತೆಲುಗು 'ಪದಕವಿತಾ ಪಿತಾಮಹ'. ಹರಿಕಥೆಗಳಲ್ಲಿ ಈ ಕವಿಯ ಕೀರ್ತನ ಸಂಪ್ರದಾಯದ ಬಳಕೆಯಿದೆ. ಹೀಗೆ 'ಹರಿಕಥೆ' ಕಲೆಯಾಗಿ ರೂಪುಗೊಳ್ಳಲು ಕಾರಣವೆನ್ನಲಾದ ಪುರಾಣ ಪ್ರವಚನ, ವೈಷ್ಣವ ಭಕ್ತಿ ಸಂಪ್ರದಾಯ, ಭಜನ ಸಂಪ್ರದಾಯ, ಜನಪದ ಕಲಾಮಾಧ್ಯಮಗಳು 15ನೆಯ ಶತಮಾನಕ್ಕೆ ಹಿಂದೆ ತೆಲುಗುನಾಡಿನಲ್ಲೂ ಪ್ರಚಲಿತವಾಗಿದ್ದವೆಂಬುದು ಖಚಿತ.

ಇಲ್ಲಿ ಒಂದು ಕುತೂಹಲದ ವಿಷಯವನ್ನು ಪ್ರಸ್ತಾಪಿಸಬಹುದು. ತೆಲುಗು ನಾಡಿನಿಂದ ವಲಸೆ ಬಂದು ಕನ್ನಡ ಕಲಿತು ಕನ್ನಡ ಕಲಾಪ್ರದರ್ಶನಗಳಿಂದಲೇ ಬಾಳುವ ದಾಸರು, ತೆಲುಗು ಬಣಜಿಗರು, ಹೆಳವರು, ಯಕ್ಷರು (ಇಂದಿಗೂ ಉತ್ತರ ಕರ್ನಾಟಕದ ಕೆಲವು ಕಡೆ ಈ ಹೆಸರಿನ ಕಲಾವಿದರಾಗಿದ್ದಾರೆಂದು, ಅವರ ಮಾತೃಭಾಷೆ ತೆಲುಗೆಂದೂ ತಿಳಿದುಬಂದಿದೆ), ಕೋಲೆಬಸವ ಕಲಾವಿದರೆಲ್ಲಾ ಇದ್ದಾರೆ. ಈ ಪ್ರಮಾಣದಲ್ಲಿ ತೆಲುಗು ನಾಡಿನ ಕಡೆಗೆ ಕನ್ನಡ ಕಲಾವಿದರು ಬಂದು ಇಲ್ಲಿಯ ಕಲೆಗಳನ್ನು ಅಲ್ಲಿಗೆ ಪ್ರಸಾರ ಮಾಡಿದ್ದು ನನ್ನ ಗಮನಕ್ಕೆ ಬಂದಿಲ್ಲ. ಹಾಗೆಯೇ ತೊಗಲು ಗೊಂಬೆಯಾಟದವರು ಮರಾಠಿ ಮಾತನಾಡುವುದು ಕರ್ನಾಟಕದ ಮಟ್ಟಿಗೆ ನಿಜವಿರಬಹುದಾದರೂ, ಮರಾಠಿ ಮೂಲದ ಕಲಾವಿದರು ಕನ್ನಡ ಗಡಿಗೆ ಸಮೀಪದಲ್ಲಿರುವ ರಾಯಲಸೀಮೆಗೆ ಮಾತ್ರ ಸೀಮಿತ. ಆಂಧ್ರದ ಕೇಂದ್ರಪ್ರಾಂತ್ಯವಾದ ಸಮುದ್ರ ತೀರದುದ್ದಕ್ಕೂ ಮರಾಠಿ ಮೂಲದ ಸೋಂಕಿಲ್ಲ. ಇದರಿಂದ ತೊಗಲುಗೊಂಬೆಯಾಟ

11. **ವೇಟೂರಿ ಆನಂದಮೂರ್ತಿ, 'ಕೃಷ್ಣಮಾಚಾರ್ಯುಲು', ಭಾರತಿ, ಡಿಸೆಂಬರ್** 1962, **ಪು.** 60.

ಆಗಲಿ. ಹರಿಕಥೆಯಾಗಲಿ ಮಹಾರಾಷ್ಟ್ರದಿಂದ ಆಂಧ್ರಕ್ಕೆ ಹೋದುದೆಂಬ ಅಭಿಪ್ರಾಯಕ್ಕೆ ಆಧಾರವಿಲ್ಲ. ಇದಕ್ಕೆ ವಿರುದ್ಧವಾಗಿ ತೆಲುಗು ಸಾಹಿತಿಗಳು, ಯಕ್ಷಗಾನ ಕಲಾವಿದರು, ಸಂಗೀತಗಾರರು, ಹರಿಕಥಾ ದಾಸರು ಮುಂತಾದವರೆಲ್ಲಾ ರಾಜಕೀಯ ಕಾರಣಗಳಿಂದ ವಿಜಯನಗರ ಕಾಲದ ಅನಂತರ ತಂಜಾವೂರು, ಮಧುರೆ, ಚೆಂಜಿ, ಪುದುಕ್ಕೋಟೆ ಮತ್ತು ಮೈಸೂರುಗಳಿಗೆ ಹೋದರು. ತೆಲುಗು ಸಾಹಿತ್ಯ ಚರಿತ್ರೆಯಲ್ಲಿ 16ನೆಯ ಶತಮಾನದ ಕೊನೆಯ ಕಾಲದಿಂದ 'ದಕ್ಷಿಣಾಂಧ್ರ ಯುಗ' ವೆಂಬುದು ಸೃಷ್ಟಿಯಾಯಿತು.

ಈ ಲೇಖನದಿಂದ ತೆಲುಗು ಹರಿಕಥೆಯೇ ಕನ್ನಡ ಹರಿಕಥೆಗೆ ಮೂಲವೆಂದು ಹೇಳುವುದು ನನ್ನ ಉದ್ದೇಶವಲ್ಲ. ಕನ್ನಡ ಹರಿದಾಸ ಚಳುವಳಿಯ ಕಾಲಕ್ಕೆ ತೆಲುಗಿನಲ್ಲೂ ಹರಿಕಥೆ ರೂಪುಗೊಂಡಿರುವುದು ಸಾಧ್ಯ ಎಂದು ಹೇಳುವುದು ಒಂದು; ತೆಲುಗು ಹರಿಕಥೆಗೆ ಮರಾಠಿ ಮೂಲ ಅಲ್ಲ ಎಂದು ಹೇಳುವುದು ಇನ್ನೊಂದು. ಇವಕ್ಕಿಂತ ಮುಖ್ಯವಾಗಿ ನನ್ನ ಅಭಿಪ್ರಾಯ ಇದು: ಕೋಲಾರದಿಂದ ಬೀದರಿನ ವರೆಗೆ ಕನ್ನಡ ನಾಡಿಗೂ ತೆಲುಗು ನಾಡಿಗೂ ಇರುವಷ್ಟು ಗಡಿಪ್ರದೇಶ ಬಹುಶಃ ರಾಷ್ಟ್ರದಲ್ಲೇ ಇನ್ನಾವ ಎರಡು ರಾಜ್ಯಗಳ ನಡುವೆ ಕೂಡ ಇಲ್ಲ. ಸಾತವಾಹನರ ಕಾಲದಿಂದಲೂ ಈ ಗಡಿಗಳು ಬದಲಾಗುತ್ತಾ ಬಂದಿವೆ. ಸಾಮಾಜಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಮೂಲವನ್ನೇ ಶೋಧಿಸಲು ಬಹಳ ಕಷ್ಟವಾಗುವಷ್ಟು ಕೊಳು ಕೊಡುಗೆಗಳು ಈ ಎರಡು ಪ್ರಾಂತ್ಯಗಳ ನಡುವೆ ನಡೆದಿವೆ. ಈ ಕಾರಣಗಳಿಂದ ಬಹುಶಃ ಮರಾಠಿ ಮೂಲವನ್ನು ಬೇರ್ಪಡಿಸಿ ಹೇಳಿದಷ್ಟು ಖಚಿತವಾಗಿ ತೆಲುಗು–ಕನ್ನಡ ಮೂಲಗಳನ್ನು ಬೇರ್ಪಡಿಸುವುದು ಸಾಧ್ಯವಿಲ್ಲವೇನೋ ಎನಿಸುತ್ತದೆ. ಒಟ್ಟಿನಲ್ಲಿ "ಹರಿಕಥೆಯ ಉಗಮದ ವಿಷಯವನ್ನು ನಾನು ತೆರೆದ ಪ್ರಶ್ನೆಯೆಂದುಕೊಂಡಿದ್ದೇನೆ"[1] ಎಂಬ ಡಾ॥ ಎಂ. ಚಿದಾನಂದಮೂರ್ತಿ ಅವರ ಅಭಿಪ್ರಾಯದ ಬಗೆಗೆ ನನಗೆ ಗೌರವವಿದೆ.

---

1. ನನಗೆ ಬರೆದ ದಿ. 22-9-83 ರ ಪತ್ರ.

# ಕೆಲಗುಂದ್ಲಿ ಶಾಸನವನ್ನು ಕುರಿತು

—ಕೃಷ್ಣವೇಣ

ಕದಂಬ ರವಿವರ್ಮನ ಕೆಲಗುಂದ್ಲಿಯ ಅಪ್ರಕಟಿತ ಶಾಸನವೊಂದನ್ನು 'ಪ್ರಜಾ ವಾಣಿ' (೭ನೆಯ ಫೆಬ್ರವರಿ ೧೯೮೩)ಯಲ್ಲಿ ಪ್ರಕಟಪಡಿಸಿದ ಡಾ॥ ಎಚ್. ಆರ್. ಆರ್ ಭಟ್ಟರ ಕಾರ್ಯ ಸ್ತುತ್ಯರ್ಹ. ಆದರೆ ಅವರ ಕಿರುಲೇಖನ ಕೆಲವು ಸಂಶಯಗಳಿಗೆ ಎಡೆ ಮಾಡಿದೆ. ಅವರು ಪ್ರಸ್ತುತ ಶಾಸನದ ಕಾಲವನ್ನು ಐದನೆಯ ಶತಮಾನದ ಉತ್ತರಾರ್ಧ ಎಂದು ಹೇಳಿದ್ದಾರೆ. ಅವರ ಈ ನಿರ್ಣಯಕ್ಕೆ ಸಾಕಷ್ಟು ಆಧಾರಗಳು ದೊರೆಯುವುದಿಲ್ಲ. ಅಲ್ಲದೆ ಅವರೇ ಕೊಟ್ಟಿರುವ ಆಧಾರಗಳು ಕೂಡ ಖಚಿತವಾದ ಕಾಲನಿರ್ಣಯಕ್ಕೆ ಪುಷ್ಟಿಯನ್ನು ನೀಡುವುದಿಲ್ಲ. ಅವರು ಕೊಟ್ಟಿರುವ ಶಾಸನ ಪಾಠ ಇಂತಿದೆ :

**ಸ್ವಸ್ತಿ ಶ್ರೀ ರವಿವರ್ಮ್ಮ[ರ್]**
**ನಾಡಾಳೆ ಮಲ್ಲಿಗೆ ಅ**
**ಅರಸರಾ ಪೆರಿಯಾ ಅರಸಿ**
**ಕಳಿಗುಜ್ಜೆ ನಿಯಾ ಪಡುಗ[ಲ್]**
**ಇನ್ನಿದಾನ್ನಮಿವೋರ್ಪ[ಜ್ಞಾಪಾ]**
**ದಗ ಸಂಯುತ್ತ ರಪ್ಪಾ[ರ್]**

ಶ್ರೀ ಭಟ್ಟರು ಸೂಚಿಸಿರುವ ಕಾಲದ ಬಗೆಗೆ 'ಪ್ರಜಾವಾಣಿ'ಯ ೧೬ನೆಯ ಫೆಬ್ರವರಿ ೧೯೮೩ರ ಸಂಚಿಕೆಯಲ್ಲಿ ಆಕ್ಷೇಪವೆತ್ತಿರುವ ಶ್ರೀ ಬಿ. ರಾಜಶೇಖರಪ್ಪನವರು ಶಾಸನದ ಕಾಲ ಕ್ರಿ.ಶ. ೬ನೆಯ ಶತಮಾನದ ಆದಿಭಾಗವಾಗಿರಲೂಬಹುದು ಎಂದು ಊಹಿಸಿದ್ದಾರೆ. ಅವರ ಪ್ರಕಾರ ರವಿವರ್ಮ್ಮನ ಆಳಿಕೆಯ ಕಾಲ ಕ್ರಿ.ಶ. ೪೯೭–೫೩೭ ಎಂಬುದು. ಆದರೆ ಲಭ್ಯ ಆಧಾರಗಳಿಂದ ರವಿವರ್ಮ್ಮನ ಕಾಲವನ್ನು ಕ್ರಿ.ಶ. ೪೮೫–೫೧೯ ಎಂದು ನಿರ್ಧರಿಸಲಾಗಿದೆ.[1]

ರಾಜಶೇಖರಪ್ಪನವರು ಭಟ್ಟರ ಶಾಸನ ಪಾಠದಲ್ಲಿ ಕೆಲವು ಅಕ್ಷರ ದೋಷಗಳನ್ನು ಗುರುತಿಸಿದ್ದಾರೆ. ಉದಾ. ಗೆ ೪ನೇ ಪಂಕ್ತಿಯ 'ಳಿ' ಮತ್ತು ೫ನೇ ಪಂಕ್ತಿಯ ಮಿ ಇತ್ಯಾದಿ. ಈ ತಪ್ಪುಗಳು ಬಹುಶಃ ಮುದ್ರಣದೋಷಗಳಾಗಿರುವ ಸಾಧ್ಯತೆ ಇದೆ. ಅವರು ಕೊಟ್ಟಿರುವ ಪಾಠ ಇಂತಿದೆ :

೧. **ಸ್ವಸ್ತಿ ಶ್ರೀ ರವಿವರ್ಮ್ಮ[ರ್]**
೨. **ನಾಡಾಳೆ ಮಲ್ಲಿಗೆ ಅ**
೩. **ಅರಸರಾ ಪೆರಿಯಾ ಅರಸಿ[ಯಾ]**
೪. **ಕಟಿಗುಜ್ಜೆ ನಿಯಾ ಪಡು[ಗಲ್]**
೫. **ಇನ್ನಿದಾನ್ನಟಿವೋರ್ಪಜ್ಞಾ ಪಾ**
೬. **ದಗ ಸಂಯುತ್ತ ರಪ್ಪಾ[ರ್]**

1. ಬನವಾಸಿ ಕದಂಬರು—ಡಾ॥ ಬಿ. ಆರ್. ಗೋಪಾಲ್

ಅವರು ಸೂಚಿಸಿರುವ ೪ನೇ ಪಂಕ್ತಿಯು ಮೊದಲಕ್ಷರ 'ರ್ಗ'ದ ತಿದ್ದುಪಡಿಯನ್ನು ಸ್ವೀಕರಿಸಬಹುದೆಂದು ತೋರುತ್ತದೆ.

ಶ್ರೀಕೃಷ್ಣ ಅವರು (ಪ್ರಜಾವಾಣಿ ೧೬–೨–೮೩ರ ಸಂಚಿಕೆ) ಕಾಲದ ಚರ್ಚೆಯನ್ನು ಇನ್ನಷ್ಟು ಹಿಂಜಿದ್ದಾರೆ. ಆದರೆ ಅವರು ಮುಂದೂಡಿರುವ ವಾದಗಳಾವುವೂ ಸಮರ್ಪಕವಾಗಿಲ್ಲ: ಅಲ್ಲದೆ ಯಾವುದೇ ಸ್ಪಷ್ಟ ಅಭಿಪ್ರಾಯವನ್ನೂ ವ್ಯಕ್ತಪಡಿಸಿಲ್ಲ. ಅವರು ತಮ್ಮ ಹೇಳಿಕೆಯಲ್ಲಿ "ಕದಂಬ ವಂಶದಲ್ಲಿ ಇಬ್ಬರು ರವಿವರ್ಮರಿದ್ದಾರೆ; ಇವರಲ್ಲಿ ಯಾರ ಕಾಲಕ್ಕೆ ಈ ಶಾಸನವನ್ನು ಬರೆಯಲಾಯಿತೆಂಬುದನ್ನು ಖಚಿತವಾಗಿ ನಿರ್ಧರಿಸಲು ಬರುವುದಿಲ್ಲ" ಎಂದಿದ್ದಾರೆ.

ಕದಂಬ ವಂಶದಲ್ಲಿ ಇಬ್ಬರು ರವಿವರ್ಮರಿದ್ದಾಗ್ಯೂ ಎರಡನೆಯ ರವಿವರ್ಮನ ಬಗೆಗೆ ನಮಗೆ ಯಾವ ಮಾಹಿತಿಯೂ ದೊರೆಯುವುದಿಲ್ಲ. ಆತನ ಆಳ್ವಿಕೆಯ ವಿಚಾರವಾಗಿಯೂ ತಿಳಿದುಬಂದಿಲ್ಲ. ಆದ್ದರಿಂದ ಪ್ರಸ್ತುತ ಶಾಸನದ ಭಾಷೆ, ಲಿಪಿ ಇವುಗಳ ಆಧಾರದ ಮೇಲೆ ಶಾಸನವನ್ನು ಕ್ರಿ.ಶ. ೪೮೫–೫೧೯ರವರೆಗೆ ಆಳಿದ ರವಿವರ್ಮನ ಕಾಲದ್ದೆಂದು ಹೇಳಬಹುದು.

ಮುಂದುವರಿದು ಅವರು "ದಿವಂಗತ ಗೋವಿಂದಪೈಗಳು ಮೂರು ಉಪನ್ಯಾಸಗಳು ಗ್ರಂಥದಲ್ಲಿ ಈಗಾಗಲೇ ಸೂಚಿಸಿರುವಂತೆ ಶ್ರವಣಬೆಳಗೊಳದ ಕೆಲವು ಶಾಸನಗಳು ಕ್ರಿ.ಶ. ೭೦೦ ಎಂದಿರುವ ಕಾರಣ ಇವೆಲ್ಲವೂ ಕ್ರಿ.ಶ. ೭೦೦ ರಲ್ಲಿಯೇ ಕೆತ್ತಲಾಗಿವೆ ಎಂದಲ್ಲ. ಬಹಳ ಹೆಚ್ಚೆಂದರೆ ಕ್ರಿ.ಶ. ೭೦೦ ರೊಳಗೆ ಕೆತ್ತಿ ಮುಗಿದಿರಬೇಕೆಂಬುದರಿಂದ ಇವೆಲ್ಲವೂ ಕ್ರಿ.ಶ. ೭ನೆಯ ಶತಮಾನದಲ್ಲಿಯೆ ಅಲ್ಲ. ಇವಲ್ಲಿ ಕೆಲವಾದರೂ ಅವಕ್ಕೆ ಒಂದೊ ಹೆಚ್ಚೊ ಶತಮಾನಗಳ ಹಿಂದೆ ಕೆತ್ತಿರಬಹುದು..." ಇತ್ಯಾದಿಯಾಗಿ ಹೇಳಿದ್ದಾರೆ. ಅವರ ಈ ವಾದದಲ್ಲಿಯೇ ಗೊಂದಲವಿರುವುದು ಸ್ಪಷ್ಟವಾಗಿದೆ. ಅಲ್ಲದೆ ಗೋವಿಂದಪೈಗಳು ಮುಂದೊಡ್ಡಿರುವ ವಾದಗಳು ಕೂಡ ಸಮರ್ಥನೀಯವಲ್ಲವೆಂಬುದನ್ನು ಈಗಾಗಲೇ ಹಲವರು ವಿದ್ವಾಂಸರು ಗುರುತಿಸಿದ್ದಾರೆ. ಆದ್ದರಿಂದ ಪೈಗಳ ವಾದವನ್ನು ಗಮನಿಸಿ ಏನನ್ನೂ ಖಚಿತವಾಗಿ ಹೇಳುವುದು ಸಾಧುವಲ್ಲ. ಶ್ರೀಕೃಷ್ಣರವರೇ ಹೇಳುವಂತೆ ೭ನೆಯ ಶತಮಾನಕ್ಕೆ ಒಂದು ಶತಮಾನ ಹಿಂದೆ ಎಂದರೆ ೬ನೆಯ ಶತಮಾನವೂ ಆಗಬಹುದಲ್ಲ? ಎಂಬ ಪ್ರಶ್ನೆ ತಲೆದೋರುತ್ತದೆ. ಅವರು ಕೊಟ್ಟಿರುವ ಪಾಠ ಇಂತಿದೆ:

೧. ಸ್ವಸ್ತಿ ಶ್ರೀರವಿವರ್ಮ್ಮ
೨. ನಾಡಾಳೆ ಮಲ್ಲಿಗೆ ಅ
೩. ಅರಸರಾ ಪೆರಿ[ಯ] ಅರಸಿ
೪. ಕಳಗು[ಜ್ಜ್ಯ]ನಿಯಾ ಪಡು
೫. ಇನ್ನಿದಾನ್ನಳಿವೋರ್ಪ
೬. ದಗ ಸಂಯುತ್ತರಪ್ಪೋರ್

ಭಟ್ಟರು ಹೇಳುವ "ಹಲ್ಮಿಡಿ ಶಾಸನದಲ್ಲಿ ಸಂಸ್ಕೃತ ಶಬ್ದಗಳ ಒಟ್ಟು ಪ್ರಮಾ ಹೆಚ್ಚಿದ್ದರೆ ಈ (ಕೆಲಗುಂದ್ಲಿ) ಶಾಸನದಲ್ಲಿ ಕನ್ನಡ ಶಬ್ದಗಳೇ ಹೆಚ್ಚು" ಎಂಬ ಮಾತನ ಒಪ್ಪಬಹುದಾದರೂ "ಕನ್ನಡ ನುಡಿಯ ಎಳಮೆ ಮತ್ತು ಹಳಮೆಗಳನ್ನು ಪ್ರದರ್ಶಿ ಸುವ ಈ ಶಿಲಾಶಾಸನ ಐದನೆಯ ಶತಮಾನದ ಹೊತ್ತಿಗೂ ನಿರ್ದಿಷ್ಟರೂಪ ಪಡೆದಿ ಎಂದು ಗೊತ್ತಾಗುತ್ತದೆ." ಎಂಬ ಹೇಳಿಕೆಯನ್ನು ಒಪ್ಪುವುದು ಕಷ್ಟ. ಈ ಸಣ ಸ್ಮಾರಕ ಶಾಸನದ ಭಾಷೆಯಿಂದ ಕನ್ನಡದ ಎಳಮೆ ಹಳಮೆಗಳನ್ನು ಗುರುತಿಸುವುದ ಸಾಧ್ಯವಿಲ್ಲ ಹಾಗೂ ಸಾಧುವೂ ಅಲ್ಲ. ಶಾಸನದ ಉದ್ದೇಶ ಮಲ್ಲಿಗೆ ಅರಸರ ಅರ ಯೊಬ್ಬಳ ಮರಣ ವಿಷಯವನ್ನು ತಿಳಿಸುವುದಷ್ಟೆ. ಅದು ಉದ್ದೇಶಿಸಿದ ವಿಷಯವನ ದಾಖಲಿಸಿ ವಿರಮಿಸಿದೆ ಅಷ್ಟೆ. ಅಷ್ಟರಿಂದಲೇ ಆಗಿನ ಭಾಷೆಯನ್ನು ಕುರಿತು ಹೇಳ ವುದು ಸರಿಯೆಂದು ತೋರುವುದಿಲ್ಲ. ಈ ಪುಟ್ಟ ಗದ್ಯಶಾಸನದಲ್ಲಿ 'ಮಾರ್ಗ' ಮತ 'ದೇಸಿ'ಗಳನ್ನು ಗುರುತಿಸುವುದೂ ಅಸಾಧ್ಯ. ಅಂತಹ ಮಾತುಗಳೆಲ್ಲ ಕೇವಲ ಊಹೆಯ ಹೇಳಿಕೆಗಳಷ್ಟೇ ಆಗುತ್ತವೆ. ಆ ಕಾಲದ ಶಾಸನಗಳಲ್ಲಿ ಸಂಸ್ಕೃತ ಭಾಷೆಯನ್ನು ಬಳಸ ತ್ತಿದ್ದರೂ ಸಂಸ್ಕೃತವನ್ನು ಬಳಸದೆ ಕೇವಲ ಕನ್ನಡದಲ್ಲಿಯೂ ಶಾಸನಗಳನ್ನು ಹಾಕಿಸ ತ್ತಿದ್ದರು ಎಂಬುದಕ್ಕೆ ಇದೊಂದು ನಿದರ್ಶನವನ್ನು ಒದಗಿಸುತ್ತದೆಂದು ಹೇಳಬಹುದು ಭಾಷೆಯ ಶೈಲಿಯಲ್ಲದೆ ಭಟ್ಟರು 'ಲಿಪಿಶೈಲಿ'ಯಲ್ಲೂ ಮಾರ್ಗ ಮತ್ತು ದೇಸಿಗಳನ ಗುರುತಿಸುವುದರ ಬಗ್ಗೆ ಹೇಳಿರುವುದು ಆಶ್ಚರ್ಯಕರ.

ಈ ಶಾಸನದ ಪಡಿಯಚ್ಚನ್ನು ಡಾ॥ ಭಟ್ಟರು ಒದಗಿಸಿದರು. ಅದನ ಪರಿಶೀಲಿಸಿ ಶಾಸನ ಪಾಠ ಈ ಕೆಳಗೆ ಕಾಣಿಸಿದಂತಿದೆ ಎಂದು ಹೇಳಬಹುದು.

**೧. ಸ್ವಸ್ತಿ ಶ್ರೀ ರವಿಮುವರ್ಮ್ಮ[ರ್]**
**೨. ನಾಡಾಳೆ ಮಲ್ಲಿಗೆ ಅ...**
**೩. ಅರಸರಾ ಪೆರಿಯಾ ಅರಸಿ[ಯಾ]**
**೪. ಕರ್ಟಿಗುಜ್ಜೈನಿಯಾ ಪಡು[ಗಲ್]**
**೫. ಇನ್ನಿದಾನ್ನಟಿಪ್ರೋಪರ್ಪ[ಚ್ಚಪಾ]**
**೬. ದಗ ಸಂಯುತ್ತರ[ಪ್ರೋರ್**

ಪ್ರಸ್ತುತ ಶಾಸನದ ರವಿವರ್ಮ ಮೊದಲನೆಯ ರವಿವರ್ಮನೆಂದು ಭಟ್ಟರ ಊಹಿಸಿರುವುದು ಸರಿಯಾಗಿದೆ. ಆದರೆ ಆತ 'ನಾಡಾಳೆ' ಎಂದು ಶಾಸನದ ಹೇಳಿರುವುದು ಗಮನಾರ್ಹ. ಇಲ್ಲಿ 'ನಾಡು' ಎಂಬ ಮಾತನ್ನು 'ರಾಜ್ಯ' ಎಂಬಥ ದಲ್ಲಿ ಬಳಸಿರಬಹುದಾಗಿದೆ. ಇಂತಹ ಪದ್ಧತಿ ನಂತರದ ಶತಮಾನಗಳಲ್ಲೂ ಕಂಡ ಬಂದಿದೆ. ಮಲ್ಲಿಗೆ ಅರಸ ಎಂದು ಹೇಳುವುದು ಸಹ ಕಷ್ಟವಾಗುತ್ತದೆ. 'ಮಲ್ಲಿಗೆ ಅ ಎಂದ ಬಳಿಕ ಎರಡು ಅಕ್ಷರಗಳು ಇದ್ದು ಅವು ಕಾಣುವುದಿಲ್ಲ. 'ಕಟಿಗುಜ್ಜೈನಿ ಎಂಬ ಹೆಸರು ಸಹ ಕುತೂಹಲಕರವಾಗಿದೆ.*

---

*** ಈ ಲೇಖನವನ್ನು ಬರೆಯಲು ಪ್ರೋತ್ಸಾಹಿಸಿ ಸಲಹೆಯನ್ನು ನೀಡಿದ ಡಾ ಬಾ. ರಾ. ಗೋಪಾಲ್ ಅವರಿಗೆ ನನ್ನ ಕೃತಜ್ಞತೆಗಳು ಸಲ್ಲುತ್ತವೆ.**

# ಐದು ಟಿಪ್ಪಣಿಗಳು

ಪ್ರೊ॥ ಸಿ. ಪಿ. ಕೃಷ್ಣಕುಮಾರ್

## ೧. ವ್ಯಾಸ ಮತ್ತು ಜನ್ನ

ಪ್ರತಿಭಾಶಾಲಿಗಳ ಮನಸ್ಸುಗಳು ಒಂದೇ ರೀತಿಯಲ್ಲಿ ಕೆಲಸ ಮಾಡುತ್ತವೆ ಎಂಬುದಕ್ಕೆ ಸಾಕ್ಷಿ ಅವರ ಕೃತಿಗಳಲ್ಲಿ ಕಂಡುಬರುವ ಭಾವ, ಅಭಿವ್ಯಕ್ತಿಗಳಲ್ಲಿನ ಸಾಮ್ಯ. ಇದಕ್ಕೆ ಪರಸ್ಪರ ಪ್ರಭಾವವೊ ಕೃತಿಚೌರ್ಯವೊ ಕಾರಣವಿರಬಹುದು ಎಂಬ ವಾದಕ್ಕೆ ಕಾಲ, ದೇಶ, ಭಾಷೆಗಳ ಅಂತರ ಬಾಧಕವಾಗುತ್ತದೆ. ಇಬ್ಬರು ಕವಿಗಳ ಪ್ರತಿಭೆಯಲ್ಲಿ ತಾರತಮ್ಯವಿದ್ದಾಗಲೂ ಒಮ್ಮೊಮ್ಮೆ ಉಕ್ತಿಸಾದೃಶ್ಯ ಗೋಚರಿಸಬಹುದು. ಭಿನ್ನ ಭಿನ್ನ ನೆಲೆಗಳಲ್ಲಿ ಕೆಲಸ ಮಾಡುವ ಪ್ರಜ್ಞೆಗಳು ಎಲ್ಲೋ ಒಂದೆಡೆ ಮುಖಾಮುಖಿಯಾಗುವುದು ಇದಕ್ಕೆ ಕಾರಣವಿದ್ದೀತು. ಒಂದು ಉದಾಹರಣೆ ಇಲ್ಲಿದೆ.

ಜನ್ನನ 'ಯಶೋಧರ ಚರಿತೆ'ಯ ಈ ಪದ್ಯ ಸುಪರಿಚಿತವಾದದ್ದು :

**ಆಗಳ್ ಬಾಳ್ ನಿಮಿರ್ದುದು ತೋಳ್**
**ತೂಗಿದುದು ಮನಂ ಕನಲ್ದುದಿರ್ವರುಮನೆರಟಿ್ ।**
**ಭಾಗಂ ಮಾಡಲ್ ಧೃತಿ ಬಂ**
**ದಾಗಳೆ ಮಾಣೆಂಬ ತೆಜದೆ ಪೇಸಿದನರಸಂ ॥** (೨-೫೩)

ಯಶೋಧರನಲ್ಲಿ ಉಕ್ಕಿದ ಕೋಪದ ತೀವ್ರತೆಯನ್ನು ಇಲ್ಲಿ ಕವಿ ಅಜಹಲ್ಲಕ್ಷಣೆಯ ಮೂಲಕ ಪರಿಣಾಮಕಾರಿಯಾಗಿ ಪ್ರತೀತಿಗೊಳಿಸಿದ್ದಾನಷ್ಟೆ.[1] ಕತ್ತಿ ತಾನಾಗಿ ನಿಗುರಿ ನಿಂತಿತು ಎಂಬುದೇ ಇಲ್ಲಿನ ಸ್ವಾರಸ್ಯ.

ಇದರೊಡನೆ, ವ್ಯಾಸಭಾರತದಲ್ಲಿ ಒಂದೆಡೆ–ಉದ್ಯೋಗ ಪರ್ವದಲ್ಲಿ–ಅರ್ಜುನ ನಾಡುವ ಈ ಮಾತನ್ನು ಹೋಲಿಸಿ :

**ಅನಾಲಬ್ಧಂ ಜೃಂಭತಿ ಗಾಂಡಿವಂ ಧನುಃ**
**ಅನಾಹತಂ ಕಂಪತಿ ಮೇ ಧನುರ್ಜ್ಯಾ ।**
**ಬಾಣಾಶ್ಚ ಮೇ ತೂಣಮುಖಾದ್ವಿಸೃತ್ಯ**
**ಮುಹುರ್ಮುಹುರ್ಗಂತುಮುಶಂತಿ ಚೈವ ॥**

(ಎತ್ತದಿದ್ದರೂ ನನ್ನ ಗಾಂಡಿವ ಮೇಲಕ್ಕೆ ಚಿಮ್ಮುತ್ತಿದೆ; ಎಳೆಯದಿದ್ದರೂ ನನ್ನ ಬಿಲ್ಲಿನ ಹೆದೆ ಕಂಪಿಸುತ್ತಿದೆ; ನನ್ನ ಬಾಣಗಳು ಬತ್ತಳಿಕೆಯಿಂದ ಮತ್ತೆ ಮತ್ತೆ ಹೊರ ಬಂದು ಮುನ್ನುಗ್ಗ ಬಯಸುತ್ತವೆ.)

1 **ನೋಡಿ: ತೀ.ನಂ.ಶ್ರೀ., 'ಭಾರತೀಯ ಕಾವ್ಯಮೀಮಾಂಸೆ', ೧೯೫೩, ಪು. ೨೫೩.**

ಅರ್ಜುನನ ಯುದ್ಧೋತ್ಸಾಹವನ್ನು, ಪಗೆಗಳ ನಾಶಕ್ಕಾಗಿ ಅವನ ಆತುರ
ಕಾತರಗಳನ್ನು ವ್ಯಾಸರು ಅತ್ಯಂತ ಧ್ವನಿಪೂರ್ಣವಾಗಿ ಅಭಿವ್ಯಕ್ತಿಸಿದ್ದಾರೆ.
ಯಶೋಧರನ ಖಡ್ಗದ ವರ್ತನೆಯೂ ಇಂಥದೇ : ಅನೈಚ್ಛಿಕ. ಒಟ್ಟಿನಲ್ಲಿ ಆಶಯ
ಮತ್ತು ಅಭಿವ್ಯಕ್ತಿ ಎರಡು ಕಡೆಯೂ ಒಂದೇ.

ವ್ಯಾಸರು ಜನ್ನನ ಕೃತಿಯನ್ನು ಕಂಡಿರುವುದು ಅಸಾಧ್ಯ : ಜನ್ನ ವ್ಯಾಸಭಾರತ
ವನ್ನು ಪೂರ್ತಿ ಓದಿದ್ದಿರಬಹುದಾದರೂ, ಸಂಬಂಧಪಟ್ಟ ಭಾಗವನ್ನು ನೆನಪಿಟ್ಟು
ಕೊಂಡಿರುವುದು ಅಸಂಭಾವ್ಯ. ಏನೇ ಇರಲಿ, ಸಾದೃಶ್ಯ ಕುತೂಹಲಕರವಾಗಿದೆ.

## ೨. ಜನ್ನನ ಅಮೃತಮತಿ

ನಮ್ಮ ಕನ್ನಡ ಕಾವ್ಯಗಳು ಸಂಸ್ಕೃತ ಅಥವಾ ಪ್ರಾಕೃತ ಕೃತಿಗಳಿಗೆ ಋಣಿಯಾಗಿ
ದ್ದರೂ, ಅವುಗಳ ಯಾಂತ್ರಿಕ ನಕಲುಗಳಾಗಿಲ್ಲ. ಜನ್ನನ ಅಮೃತಮತಿಯ ಪಾತ್ರ
ಇದಕ್ಕೊಂದು ಕಿರು ನಿದರ್ಶನವಾಗಬಲ್ಲುದು. ಮೂಲದಲ್ಲಿಲ್ಲದ ಒಂದು ಆಯಾಮ
ವನ್ನು ಈ ಪಾತ್ರ ಗಳಿಸಿಕೊಂಡಿರುವುದು ಸೂಕ್ಷ್ಮವಾದ ನೋಟಕ್ಕೆ ವಿದಿತವಾಗುತ್ತದೆ.

ಮೂಲದಲ್ಲಿ–ವಾದಿರಾಜನಲ್ಲಿ–ಅಮೃತಮತಿ ಹೇಳುತ್ತಾಳೆ : "ತಸ್ಮಾದಸೌ
ಮಾಂ ಪ್ರತಿ ಕಾಮದೇವಃ". ಅವಳ ಮೋಹದ ಉತ್ಕಟತೆ ಈ ಮಾತಿನಲ್ಲಿ ಸ್ಪಷ್ಟ.
ಜನ್ನ ಇದನ್ನು ವಿಸ್ತರಿಸಿದ್ದಾನೆ : "ಇಂದೆನಗಾತನೇ ಕುಲದೈವಂ ಕಾಮದೇವನಿಂದ್ರಂ
ಚಂದ್ರಂ." ಅಮೃತಮತಿಯ ಪಾಲಿಗೆ ಅಷ್ಟವಂಕ ಇಂದ್ರ ಚಂದ್ರ ಮಾತ್ರವಲ್ಲ. ಅಷ್ಟೇ
ಆಗಿದ್ದರೆ ಅವಳು ತನ್ನ ವ್ಯಾಮೋಹವನ್ನು ಗೆಲ್ಲುತ್ತಿದ್ದಳೊ ಏನೊ. ಆದರೆ ಆ ಕುರೂಪಿ
ಅವಳ ಪಾಲಿಗೆ 'ಕುಲದೈವ'ವಾಗಿಬಿಟ್ಟಿದ್ದಾನೆ. ಅವನ ಬಗೆಗೆ ಅವಳ ಮೋಹ
ಕೇವಲ ದೈಹಿಕ, ಲೌಕಿಕ ಸ್ತರದ್ದಾಗದೆ religious (ಧಾರ್ಮಿಕ) ಎನ್ನಬಹುದಾದ
ಹಂತದ್ದಾಗಿದೆ. ಎಂತಲೆ ಅವಳು ಅದನ್ನು ಮೆಟ್ಟಲಾರಳು : ಕುಲದೈವವನ್ನು
ಉಲ್ಲಂಘಿಸಲಾರಳು. ಎಂದರೆ, ಅಷ್ಟವಂಕನನ್ನು ಕುರಿತ ಅಮೃತಮತಿಯ ಭಾವ
ರಕ್ತಿ ಮಾತ್ರವಲ್ಲ, ಒಂದು ಬಗೆಯ (ವಿಕೃತ)ಭಕ್ತಿ ಕೂಡ. ರೂಪೈಕ ಪಕ್ಷಪಾತ
ವಲ್ಲದ ಈ ನಿಷ್ಠೆ ಕಡೆಯವರೆಗೂ ಉಳಿಯುತ್ತದೆ.

ಅಷ್ಟವಂಕನ ಸುಖಾವಹವಾದ ಸಂಗೀತವನ್ನು ಕೇಳಿ ಅಮೃತಮತಿ ಅವನನ್ನು
ಬಯಸಿದಳು ('ಚಕಾರ ತೃಷ್ಣಾಂ') ಎಂದಷ್ಟೆ ಮೂಲಕವಿ ಹೇಳಿದರೆ, ಜನ್ನ "...ಮೃಗ
ಲೋಚನೆ ತಿಳಿದಾಲಿಸಿ ಮಟ್ಟಿದ ಮನಮಂ ತೊಟ್ಟನೆ ಪಸಾಯದಾನಂಗೊಟ್ಟಳ್"
ಎಂದು ರೂಪಕನಿರ್ಮಾಣ ಮಾಡುತ್ತಾನೆ. 'ಪಸಾಯದಾನ'ವಾಗಿ ಕೊಟ್ಟ ಯಾವ
ವಸ್ತುವನ್ನೆ ಆಗಲಿ ಮರಳಿ ಪಡೆಯುವುದು ಸಾಧುವೆ, ಸಾಧ್ಯವೆ ? ಮನವೂ ಅಷ್ಟೆ ;
ಒಮ್ಮೆ ಕೊಟ್ಟರೆ ಹೊರಟೇ ಹೋಗುತ್ತದೆ. ಅಷ್ಟವಂಕನಲ್ಲಿ ನೆಟ್ಟ ಅಮೃತಮತಿಯ
ಚಿತ್ತ ಮತ್ತೆ ಹಿಂದಿರುಗಲಿಲ್ಲ. ಅವಳೂ ಅಷ್ಟೆ : ಹೇಸದೆ ತನ್ನ ದೈವದೊಡನೆ
ನರಕಕ್ಕಿಳಿದಳು.

ಆ ಹೆಣ್ಣಿನ ಅಧಃಪತನದ ಅನಿವಾರ್ಯತೆ ಎದೆಯನ್ನು ಬಲವಾಗಿ ಕಲಕುತ್ತದೆ. ಅವಳ ವರ್ತನೆಯನ್ನು ಜನ್ನ ಮೂಲಕ್ಕಿಂತ ಚೆನ್ನಾಗಿ ಅರ್ಥೈಸುತ್ತಾನೆ.

### ೩. ನೇಮಿಚಂದ್ರನ ಒಂದು ರೂಪಕಸಮುಚ್ಚಯ

ಉಪಮಾನದ ಮುಂದುವರಿದ ಹಂತವೇ ರೂಪಕ; ಉಪಮಾನದಲ್ಲಿರುವ ಅನುಭವಕ್ಕಿಂತ ತೀವ್ರತರವಾದದ್ದು ರೂಪಕದಲ್ಲಿರುವ ಅನುಭವ. ಎರಡು ವಸ್ತುಗಳ ಅಭೇದ ರೂಪಕದಲ್ಲಿ ವ್ಯಕ್ತವಾಗುತ್ತದೆ. ಈ ಅಭೇದದ ಪರಾಕಾಷ್ಠೆಯನ್ನು, ತನ್ಮೂಲಕ ಅನುಭವದ ಅತ್ಯುತ್ಕಟತೆಯನ್ನು ಸಂವಹನಗೊಳಿಸುವ ನೇಮಿಚಂದ್ರನ ಈ ರೂಪಕಸಮುಚ್ಚಯವನ್ನು ಗಮನಿಸಬಹುದು.

**ಜಿನನ ಮತವೆನ್ನ ಮನವದು**
**ಜಿನನಾಕೃತಿಯೆನ್ನ ನಯನವದು ಪರಮಾರ್ಥಂ।**
**ಜಿನನ ನುಡಿಯೆನ್ನ ಕಿವಿಯದು**
**ಜಿನನಡಿಗಳಿವೆನ್ನ ನೊಸಲದೇಂ ವಿಸ್ಮಯಮೋ[1] ॥**

ಭಕ್ತಚೇತನ ಇಷ್ಟದೈವಕ್ಕೆ ತನ್ನನ್ನು ಪೂರ್ಣವಾಗಿ ಸಮರ್ಪಿಸಿಕೊಂಡು, ಸ್ವತಂತ್ರವಾದ ವ್ಯಕ್ತಿತ್ವವನ್ನು ಇಲ್ಲಗೈದುಕೊಂಡಿರುವ ಪರಿ ಇಲ್ಲಿ ಅನನ್ಯವಾಗಿ ಧ್ವನಿತವಾಗುತ್ತದೆ. ಮತ–ಮನ, ಆಕೃತಿ–ನಯನ, ನುಡಿ–ಕಿವಿ, ಅಡಿ–ನೊಸಲು ಬೇರೆ ಬೇರೆಯಾಗಿರದೆ ಒಂದೇ ಆಗಿಹೋಗಿವೆ. ತನ್ಮೂಲಕ, ಜೀವಾತ್ಮನ ನಿವೇದನ ಮತ್ತು ಪರಮಾತ್ಮನ ಅವತರಣ ಸಂಪೂರ್ಣವಾಗಿ ಪರಿಣಮಿಸಿವೆ. ಎರಡೂ ಅನ್ಯೋನ್ಯಾಶ್ರಿತ.

ಬಸವಣ್ಣನವರ "ವಚನದಲ್ಲಿ ನಾಮಾಮೃತ ತುಂಬಿ, ಕಿವಿಯಲಿ ನಿಮ್ಮ ಕೀರುತಿ ತುಂಬಿ..." ಎಂಬ ವಚನದ ಅಭಿಪ್ರಾಯವೆ ನೇಮಿಚಂದ್ರನ ಈ ಪದ್ಯದಲ್ಲೂ ಇರತಕ್ಕದ್ದು. ಆದರೆ ತೀವ್ರತೆಯಲ್ಲಿ ನೇಮಿಯ ವಾಣಿ ಇನ್ನೂ ಮುಂದೆ ಹೋಗಿದೆ; ಅವನ ಪ್ರತಿಭೆಯ ಬಗೆಗೆ ಗೌರವ ಮೂಡಿಸುವಂತಿದೆ.

### ೪. "ಹರನ ವದನಕೆ ಬೆವರ ತಹೆ"

ಮಹಾಕವಿಯ ಕೃತಿ ಸರ್ವಾಂಗ ಧ್ವನಿಸಮನ್ವಿತವಾಗಿರುತ್ತದೆ. ಅದರಲ್ಲೂ ಕುಮಾರವ್ಯಾಸನಂಥ ಮಹಾಕವಿಯಲ್ಲಿ ಈ ವಿದ್ಯಮಾನ ಪರಮಾವಧಿ ಕಂಡುಬರುತ್ತದೆ. ಹೇಗೆ ಅವನ ಒಂದೊಂದು ಮಾತೂ ಧ್ವನಿಗರ್ಭಿತವೆಂಬುದಕ್ಕೆ ಒಂದೇ ಒಂದು ಉದಾಹರಣೆ ಕೊಡುವುದಷ್ಟೆ ಇಲ್ಲಿ ವಿವಕ್ಷಿತ.

---

1 **'ನೇಮಿನಾಥಪುರಾಣ', ೨-೫೫.**

ಅಭಿಮನ್ಯುವಿನ ಬಾಯಲ್ಲಿ ಬರುವ ವೀರಾಲಾಪವಿದು :

**ಬವರವಾದಡೆ ಹರನ ವದನಕೆ**
**ಬೆವರ ತಹೆನವಗಡಿಸಿದರೆ ವಾ**
**ಸವನ ಸದೆವೆನು ..  (ದ್ರೋ.ಪ. ೪-೫೬)**

ಇಲ್ಲಿ "ಹರನ ವದನಕೆ ಬೆವರ ತಹೆ"ನೆಂಬುದರ ಸ್ವಾರಸ್ಯವನ್ನು ನೋಡೋಣ. ಬೆವರನ್ನು ಕುರಿತಂತೆ ಹರನನ್ನೆ ಏತಕ್ಕೆ ಕವಿ ಇಲ್ಲಿ ಹೆಸರಿಸಿದ ? ಬೇರೆ ದೇವತೆಗಳಿರಲಿಲ್ಲವೆ ?

ನಾವು ಜ್ಞಾಪಿಸಿಕೊಳ್ಳಬೇಕು. ಶಿವ ಫಾಲನೇತ್ರನೆಂಬುದನ್ನು. ('ಹರ' ಎಂಬುವರಲ್ಲಿ ಇದು ಇಂಗಿತ). ಬೆಂಕಿಯ ಸನಿಹದಲ್ಲಿ ಯಾರಾದರೂ ಬೆವರುತ್ತಾರೆ. ಆದರೆ ಹರನ ಹಣೆಗಣ್ಣು ಅಗ್ನಿಕುಂಡವಾಗಿ ಸದಾ ಧಗಧಗಿಸುತ್ತಿದ್ದು, ಅದಕ್ಕೆ ಅವನ ಮುಖ ಒಗ್ಗಿಹೋಗಿರುವುದರಿಂದ. ಅದು ಬೆವರುವುದು ಸಾಧ್ಯವೆ ಇಲ್ಲ. ಅಂತಹ ಮುಖದಲ್ಲೂ ಬೆವರು ಬರುವಂತೆ ಮಾಡಬೇಕಾದರೆ. ಅಭಿಮನ್ಯುವಿನ ಪ್ರತಾಪ. ಶೌರ್ಯಜ್ವಾಲೆ ಎಂಥದಿರಬೇಕು ! ಬೇರೆ ಯಾವ ದೇವತೆಯಾದರೂ ಬೆವರುವಂತೆ ಮಾಡುವುದು ಸುಲಭ ಸಾಧ್ಯ. ಆದರೆ ಹರನ ವದನವೆ ಬೆವರುವಂತೆ ಮಾಡುವುದು ಅಭಿಮನ್ಯುವಿನಂಥ ಅಸಾಮಾನ್ಯ ವೀರನಿಂದ ಮಾತ್ರ ಆಗುವ ಕೆಲಸ. ಅವನಿಗೆ ಮತ್ತಾವ ಪ್ರಮಾಣಪತ್ರವೂ ಅಗತ್ಯವಿಲ್ಲ, ಮಹಾಕವಿಯ ವಿಶಿಷ್ಟ ಉಕ್ತಿಯನ್ನುಳಿದು.

ಕುಮಾರವ್ಯಾಸ. ಅವನ ಅಭಿಮನ್ಯು–ಇಬ್ಬರೂ ಅಪ್ರತಿಮರು, ಅಪ್ರತಿಹತರು !

## ೫. ಉತ್ತರದೇವಿಯ ಹಾಡು

ಜನಪದ ಸಾಹಿತ್ಯದಲ್ಲಿ ಪ್ರಸಿದ್ಧವಾದ ಈ ಹಾಡು ಅನೇಕ ಪಾಠಗಳಲ್ಲಿ ದೊರೆಯುತ್ತದೆ. ಇಲ್ಲಿ ಒಂದು ಪಾಠವನ್ನು ಗಮನಿಸಿ. ಎರಡು ಮಾತು.

ಇದೊಂದು ಹೃದಯವೇಧಕವಾದ ಗೀತೆ : ಉತ್ತರದೇವಿಯ ಪಾಡು ಇಲ್ಲಿ ಹಾಡಾಗಿದೆ. ಆದರೆ ಇದು ಅವಳೊಬ್ಬಳದೇ ಅಲ್ಲ : ಭಾರತೀಯ ಹೆಣ್ಣಿನ ಹಣೆಬರಹವೇ ಇಲ್ಲಿದೆ ಎನ್ನಬಹುದು.

ಉತ್ತರದೇವಿಯ ಗಂಡನಿಗೆ ಅವನ ತಾಯಿ ಹೇಳುತ್ತಾಳೆ– "ಬಿಟ್ಟುಬಿಡವಳ ತವರಿಗೆ." ಅವನು ಅರೆಮನಸ್ಸಿನಿಂದ ಹೆಂಡತಿಯನ್ನು ಬಿಡುತ್ತಾನೆ. ಉತ್ತರದೇವಿ ತವರಿಗೆ ಹೋಗುತ್ತಾಳೆ. ಕ್ರಮವಾಗಿ ಅಪ್ಪ, ಅಣ್ಣ, ಅಕ್ಕ, ತಮ್ಮ, ತಂಗಿಯರ ಮನೆಗಳಿಗೆ ಹೋಗಿ, ಬಾಗಿಲು ತೆರೆಯುವಂತೆ ಬೇಡುತ್ತಾಳೆ. ಎಲ್ಲರೂ ನೆಪ ಹೇಳಿ. ನಿರಾಕರಿಸುತ್ತಾರೆ. ಕಡೆಗೆ ತಾಯ ಮನೆಗೆ ಬಂದು, "ನನ್ನವ್ವಾ ನನಗೆ ಕದ ತೆಗಿಯೇ" ಎಂದಾಗ, ತಾಯಿ ಕದ ತೆರೆದು "ಕಣ್ಣೀರ ಕೋಡಿ ಹರಿಸ್ಯಾಳು." ತಾಯ್ತನದ, ವಾತ್ಸಲ್ಯದ ಬಾಗಿಲು ಎಂದಾದರೂ ಮುಚ್ಚೀತೆ ?

ತಾಯಿ ಹೇಳುವ ಚುಟುಕು ಮಾತು ಅತ್ಯಂತ ಗಮನಾರ್ಹ :

ನಿಮ್ಮಪ್ಪ ನನ್ನ ಉರಸಿದ–ನನ ಮಗಳೆ
ನನ್ಹಾಡು ನಿನಗೆ ಇಗಟೀತೆ—ನನ ಮಗಳೆ
ಉತ್ರೀ ಮಳೆಯಾಗಿ ಹೊರಡನ್ವಾ.

ಉತ್ತರದೇವಿಯ ಹಾಡು–ಪಾಡು ಅವಳದು ಮಾತ್ರವಲ್ಲ, ಅವಳ ತಾಯಿಯದೂ ಹೌದು.[1] ಆ ತಾಯಿಯೂ ಅದನ್ನು ಬಹುಶಃ ತನ್ನ ತಾಯಿಂದ ಬಳುವಳಿಯಾಗಿ ಪಡೆದಿದ್ದಿರಬಹುದು. ಹೀಗೆ ಇದು ಹಿಂದುಹಿಂದಕ್ಕೆ ಅನಂತವಾಗಿ ಹೋಗುವ, ಪರಂಪರಿತವಾದ 'ಹಾಡು': ಮುಂದಕ್ಕೂ ಹೋಗುವಂಥದು. ಭಾರತೀಯ ಸಮಾಜದಲ್ಲಿ ಪಾಡು, ಹಾಡು ಎರಡೂ ಮಹಿಳೆಯರಿಗೆ ಮಾತ್ರಾರ್ಜಿತವಾದ ಸಂಪತ್ತು!

ಆದರೆ ಉತ್ತರದೇವಿಯ ಕಣ್ಣೀರು ವ್ಯರ್ಥವಾಗುವುದಿಲ್ಲ ; ಅದು ಮಳೆಯಾಗಿ ಲೋಕಕ್ಕೆ ಉಪಕಾರಕವಾಗುತ್ತದೆ. ಭಾರತೀಯ ಸ್ತ್ರೀಯ ತ್ಯಾಗ, ಬಲಿದಾನಗಳು ಅಮೋಘವಾದವು : ಮನೆಯ ನಂದಾದೀಪಕ್ಕೆ ಅವಳ ಕಂಬನಿಯೆ ಎಣ್ಣೆ. ಆದರೆ ಆ ಬಗ್ಗೆ ಪುರುಷವರ್ಗ ಹೆಮ್ಮೆ ಪಡುವಂತಿಲ್ಲ.

ಹೆಣ್ಣಿನ ಪರಂಪರಾಗತ ಶೋಷಣೆಗೆ ಮಾರ್ಮಿಕವಾಗಿ ಅಭಿವ್ಯಕ್ತಿ ಕೊಟ್ಟಿರುವ ಈ ಹಾಡನ್ನು ಇಂದಿನ ಪರಿಭಾಷೆಯಲ್ಲಿ ಬಂಡಾಯ ಸಾಹಿತ್ಯವೆನ್ನಬಹುದೆ ?

---

1 "ನಿಮ್ಮಪ್ಪ ನನ್ನ ಉರಸಿದ" ಎನ್ನುವಲ್ಲಿ, 'ಉರಸಿದ' ಎಂಬ ಮಾತಿನ ಶಕ್ತಿಯನ್ನು ನೋಡಬೇಕು. ಇದರ ವಾಚ್ಯಾರ್ಥವೂ ಗ್ರಾಹ್ಯ. ಹೆಣ್ಣುಗಳನ್ನು ಹಿಂದೆ ಬಲವಂತದಿಂದ ಚಿತೆಗೆ ನೂಕುತ್ತಿದ್ದರು. ಇಂದು ವರದಕ್ಷಿಣೆಗಾಗಿ ಸುಡುತ್ತಿದ್ದಾರೆ. ಅಂತೂ ಅವಳೊಂದು ಬತ್ತಿ!

# ಕವಿರಾಜಮಾರ್ಗದ ನೂತನ ಸಂಸ್ಕರಣ*

(ಗ್ರಂಥಸಮೀಕ್ಷೆ)

—ವಿದ್ವಾನ್ ಎನ್. ರಂಗನಾಥ ಶರ್ಮಾ

ಇದುವರೆಗೆ ದೊರಕಿರುವ ಕನ್ನಡ ಗ್ರಂಥಗಳಲ್ಲಿ ಅತ್ಯಂತ ಪ್ರಾಚೀನವಾದದು ಕವಿರಾಜಮಾರ್ಗ. ಕಾವ್ಯಸಾಹಿತ್ಯಕ್ಕೆ ಸಂಬಂಧಿಸಿದ ಈ ಲಕ್ಷಣಗ್ರಂಥ ಕ್ರಿ.ಶ 9ನೆಯ ಶತಕದಲ್ಲಿ ರಚಿತವಾದದ್ದು. ಪ್ರಾಚೀನ ಕನ್ನಡ ವಾಙ್ಮಯ, ಛಂದಸ್ಸು ವ್ಯಾಕರಣ—ಮುಂತಾದ ಅನೇಕ ವಿಷಯಗಳ ಮೇಲೆ ಬೆಳಕು ಚೆಲ್ಲುವ ಈ ಗ್ರಂ ಅಮೂಲ್ಯವಾದದ್ದು. ಅಂತೆಯೇ ಇದು ಕನ್ನಡ ವಿದ್ವಜ್ಜನರ ಗಮನವನ್ನು ವಿಶೇಷವಾಗಿ ಸೆಳೆದದ್ದು ಸಹಜ. ವಿಖ್ಯಾತ ವಿದ್ವಾಂಸರು ಇದರ ವಿಷಯವಾ ಅಭ್ಯಾಸಪೂರ್ಣ ಪ್ರಬಂಧಗಳನ್ನು ಬರೆದಿದ್ದಾರೆ. ನಾವೀಗ ಸಮೀಕ್ಷಿಸಲಿರುವ ಗ್ರಂಥವ ಸೇರಿ ಕವಿರಾಜಮಾರ್ಗದ ಐದು ಸಂಸ್ಕರಣಗಳು ಹೊರಬಂದಿವೆ. ಹಸ್ತಪ್ರತಿಗಳಲ್ಲಿ ಅಪಪಾಠಗಳ ಬಾಹುಲ್ಯದಿಂದಾಗಿ ಈ ಗ್ರಂಥದ ಪರಿಷ್ಕರಣಕಾರ್ಯ ಕಠಿಣವಾ ಪರಿಣಮಿಸಿದೆ. ಹಲವಾರು ಸಮಸ್ಯೆಗಳನ್ನು ತಂದೊಡ್ಡಿದೆ.

ಹಿಂದಿನ ಸಂಸ್ಕರಣಗಳಲ್ಲಿ ಪ್ರೊ॥ ಎಂ.ವಿ. ಸೀತಾರಾಮಯ್ಯನವರು ಸಂಪಾದಿಸಿ ಮೂರನೆಯ ಸಂಸ್ಕರಣ ವಿಶೇಷ ಗಮನಾರ್ಹವಾದುದು. ಅದುವರೆಗೆ ದೊರಕಿ ಸಾಮಗ್ರಿಗಳೆಲ್ಲವನ್ನೂ ಚೆನ್ನಾಗಿ ಅಧ್ಯಯನ ಮಾಡಿ ಪರಿಷ್ಕೃತ ಗ್ರಂಥಪಾಠ, ವಿಸ್ತಾ ವಾದ ಪೀಠಿಕೆ, ವಿವರಣಾತ್ಮಕ ಟಿಪ್ಪಣಿಗಳು, ಅಧ್ಯಯನಕ್ಕೆ ನೆರವು ನೀಡು ಉಪಯುಕ್ತ ಅನುಬಂಧಗಳು—ಇವನ್ನು ಪ್ರೊ॥ ಎಂ.ವಿ.ಸೀ.ಯವರು ಅದರ ದೊರಕಿಸಿಕೊಟ್ಟರು. ಅವರೇ ಮತ್ತೆ ವಿದ್ಯಾರ್ಥಿಗಳ ಉಪಯೋಗಕ್ಕಾಗಿ ಪೀಠಿ ಮೊದಲಾದ್ದನ್ನು ಮಾತ್ರ ಸಂಕ್ಷೇಪಿಸಿ, ಕವಿರಾಜಮಾರ್ಗದ ಇನ್ನೊಂದು ಸುಲಭ ಬೆಲೆಯ ಸಂಸ್ಕರಣವನ್ನೂ ತಂದಿದ್ದಾರೆ. ಇಷ್ಟಾದರೂ ಈ 'ರಾಜಮಾರ್ಗ' ದುರ್ಗಮ ವಾಗಿಯೇ ಇದೆ. ಕಲ್ಲು ಮುಳ್ಳು ಹಳ್ಳ ತಿಟ್ಟುಗಳಿಂದ ವಿಷಮಮಾರ್ಗವಾಗಿ ಕಂಡ ಅಚ್ಚರಿಯಲ್ಲ.

ಅಶುದ್ಧಪಾಠಭೂಯಿಷ್ಠವೂ ಶಾಸ್ತ್ರಾತ್ಮಕವೂ ಆದ ಕವಿರಾಜಮಾರ್ಗವನ ಪೂರ್ಣವಾಗಿ ಪರಿಷ್ಕರಿಸುವುದಾಗಲಿ, ಹೊಸಗನ್ನಡದಲ್ಲಿ ಅನುವಾದಿಸುವುದಾಗ ಸಾಮಾನ್ಯರಿಗೆ ಶಕ್ಯವಾದ್ದಲ್ಲ. ಭಾಮಹನನ್ನು ಮತ್ತು ವಿಶೇಷವಾಗಿ ದಂಡಿಯನ

---

"ನೃಪತುಂಗದೇವಾನುಮತಂ ಶ್ರೀ ವಿಜಯಪ್ರಭೂತಂ ಕವಿರಾಜಮಾರ್ಗಂ";
ಸಂಪಾದಕರು: ಡಾ॥ ಕೆ. ಕೃಷ್ಣಮೂರ್ತಿ, ಎಂ.ಎ., ಬಿ.ಟಿ., ಪಿಎಚ್.ಡಿ.
ಪ್ರಕಾಶಕರು: ಐ. ಬಿ. ಎಚ್. ಪ್ರಕಾಶನ, ಗಾಂಧಿನಗರ, ಬೆಂಗಳೂರು;
ಪುಟ: 179 + 44. ಬೆಲೆ: ಸಾದಾ ಪ್ರತಿ ರೂ. ೨೦–೦೦; ಉತ್ತಮ ಪ್ರತಿ ರೂ. ೩೦–೦

ಅನುಸರಿಸುವ ಈ ಗ್ರಂಥದ ಶೋಧನೆಗೆ ಸಂಸ್ಕೃತ ಲಕ್ಷಣ ಗ್ರಂಥಗಳಲ್ಲಿ ಒಳ್ಳೆಯ ಪಾಂಡಿತ್ಯ ಉಳ್ಳವರು ಕೈಹಾಕಿದರೆ ಯಶಸ್ವಿಯಾದಾರು. ಪ್ರಸ್ತುತ ಸಂಪಾದಕರೂ ಅನುವಾದಕರೂ ಆದ ಡಾ॥ ಕೆ. ಕೃಷ್ಣಮೂರ್ತಿಗಳು ಅಲಂಕಾರ ಶಾಸ್ತ್ರದಲ್ಲಿ ನಿರರ್ಗಳ ವಾದ ವಿದ್ವತ್ತೆಯನ್ನು ಗಳಿಸಿದ ವಿದ್ವನ್ಮೂರ್ಧನ್ಯರು. ಬಹುಸಂಖ್ಯೆಯಲ್ಲಿ ಅಲಂಕಾರ ಗ್ರಂಥಗಳನ್ನು ಶೋಧಿಸಿ, ಅನುವಾದಿಸಿ, ಭಾಷಾಂತರಿಸಿ ವಿಖ್ಯಾತರಾದವರು. ಇವರು ಈ ಗ್ರಂಥದ ಸಂಸ್ಕರಣಕ್ಕೆ ಮನಸ್ಸು ಮಾಡಿದುದು ಕನ್ನಡಿಗರ ಸೌಭಾಗ್ಯ. ಇವರೇ ತಿಳಿಸುವಂತೆ "ಶಾಸ್ತ್ರೀಯ ಪಾಠಶೋಧನೆಯಿಂದ ನಿರ್ಣೀತವಾದ ಮೂಲ ಹಾಗೂ ಪಾಠಾಂತರಗಳ ನಿರ್ದೇಶನ, ಸಂಪೂರ್ಣ ಹೊಸಗನ್ನಡ ಅನುವಾದ, ವಿವರಣಾತ್ಮಕ ಟಿಪ್ಪಣಿಗಳು ಮತ್ತು ವಿವೇಚನಾತ್ಮಕ ಪೀಠಿಕೆಯೊಡನೆ" ಸಹಿತವಾದ ಈ ನೂತನ ಸಂಸ್ಕರಣವನ್ನು ಹೃತ್ಪೂರ್ವಕವಾಗಿ ಸ್ವಾಗತಿಸುತ್ತೇವೆ.

ಈ ಸಂಪಾದಕರು ಕವಿರಾಜಮಾರ್ಗದ ಕರ್ತೃ ನೃಪತುಂಗನೊ ಶ್ರೀವಿಜಯನೊ?– ಎಂಬ ವಿವಾದಾತ್ಮಕ ವಿಷಯವನ್ನು ಪೀಠಿಕೆಯಲ್ಲಿ ಪ್ರಸ್ತಾವಿಸಿ ಚರ್ಚಿಸಿದ್ದಾರೆ. ಈಗಿರುವ ಸಾಮಗ್ರಿಗಳಿಂದ ಯಾವ ನಿರ್ಣಯವನ್ನೂ ಕೊಡಲು ಸಾಧ್ಯವಾಗದೆಂದೂ ಶ್ರೀವಿಜಯನು ಇದರ ಕರ್ತೃವೆಂಬ ಪಕ್ಷ ಹೆಚ್ಚು ಸಬಲವಾಗಿದೆಯೆಂದೂ ತಿಳಿಸಿದ್ದಾರೆ. ಅನುವಾದದ ಕ್ಲೇಶವನ್ನು ವಿವರಿಸುತ್ತ ಪ್ರೊ॥ ಎಂ. ವಿ. ಸೀತಾರಾಮಯ್ಯನವರು ಮಾಡಿರುವ ಕೆಲವೇ ಪದ್ಯಗಳ ಅನುವಾದದಲ್ಲಿ ಸಹ ಪ್ರಮಾದಗಳಾಗಿವೆಯೆಂಬುದನ್ನು ವಿವೇಚಿಸಿ ತೋರಿಸಿದ್ದಾರೆ. ನಾವು ಮೊದಲೇ ಹೇಳಿದಂತೆ ಈ ಗ್ರಂಥದ ಅನುವಾದ ಕ್ಲಿಷ್ಟವಾದದ್ದು ಹೌದು. ಎಂತಹ ವಿದ್ವಾಂಸನಾದರೂ ಮುಗ್ಗರಿಸುವುದು ಸಹಜ. ಯಾರೇ ಆಗಲಿ, ತಪ್ಪನ್ನು ಎತ್ತಿ ತೋರಿಸುವಾಗ ಭಾಷೆಯಲ್ಲಿ ಸಂಯಮ ಅಗತ್ಯ. ಈ ವಿಷಯದಲ್ಲಿ ಡಾ॥ ಕೆ. ಕೃಷ್ಣಮೂರ್ತಿಯವರ ಭಾಷೆ ಮಿತಿಯ ಗೆರೆಯನ್ನು ದಾಟಿದೆ ಎನಿಸುತ್ತದೆ. ಯಾರೂ ತುಳಿಯದ ಮಾರ್ಗದಲ್ಲಿ ಮುನ್ನುಗ್ಗಿದ ಪ್ರೊ॥ ಎಂ.ವಿ.ಸೀ.ಯವರ ಸಾಧನೆ ಸಾಮಾನ್ಯವಾದದ್ದಲ್ಲ. ಮುಂದೆ ಸಾಗಿದ ಅವರು ಕತ್ತಲಲ್ಲಿ ಎಡವಿದರೆ, ಹಿಂದೆ ಸಾಗತಕ್ಕವರಿಗೆ ಅದು ಎಚ್ಚರಿಕೆಯನ್ನಿತ್ತು ಉಪಕರಿಸುತ್ತದೆಯೆಂಬುದನ್ನು ಮರೆಯಬಾರದು.

ಉದಾಹರಣೆಗೆ. ಮಾರ್ಗಕಾರನ 'ಮಹಾಧ್ವಕೃತಿ' (I–೧೬) ಎಂಬ ಶಬ್ದಕ್ಕೆ ಪ್ರೊ॥ ಎಂ.ವಿ.ಸೀ. ಅವರು 'ಮಹಾಮಾರ್ಗಕಾವ್ಯ' ಎಂದು ಅರ್ಥ ಬರೆದಿದ್ದಾರೆ. ಇದನ್ನು ಡಾ॥ ಕೆ. ಕೃ. ಅವರು ಪ್ರಬಲವಾಗಿ ದೂಷಿಸಿ ಇದು ಅಕ್ಷರಾನುವಾದವಾಯಿತೆಂದು ಹೇಳಿದ್ದಾರೆ. ಸ್ವತಃ ಅನುವಾದ ಮಾಡುವಾಗ 'ದೊಡ್ಡಮಾರ್ಗಕಾವ್ಯಗಳನ್ನು (=ಮಹಾಕಾವ್ಯಗಳನ್ನು)' ಎಂದೇ ಬರೆದಿದ್ದಾರೆ (ಪುಟ. 5). 'ದೊಡ್ಡಮಾರ್ಗ ಕಾವ್ಯ' ಎಂಬ ಶಬ್ದ ಎಲ್ಲಾದರೂ ಬಳಕೆಯಲ್ಲಿದೆಯೊ? ಪ್ರೊ॥ ಎಂ.ವಿ.ಸೀ.ಯವರು ಕಂಸದಲ್ಲಿ 'ಮಹಾಕಾವ್ಯ' ಎಂದು ಬರೆಯಲಿಲ್ಲ. ಅದೇ ಒಂದು ಉಲ್ಲೇಖನೀಯ ದೋಷವಾಗಿ ಇವರಿಗೆ ಕಂಡಿದೆ.

ನಮಗೆ ಹೀಗೆ ತೋರುತ್ತದೆ : ಮಾರ್ಗಕಾರನು ಮಾರ್ಗ, ಅಧ್ವ ಎಂಬ ಶ
ಗಳನ್ನೇ ಮತ್ತೆ ಮತ್ತೆ ಬಳಸುತ್ತಾನೆ. ಲಕ್ಷಣಬದ್ಧವಾದ ಮಹಾಕೃತಿಯನ
'ಮಹಾಕಾವ್ಯ'ವೆನ್ನುವುದಕ್ಕಿಂತ 'ಮಹಾಮಾರ್ಗಕಾವ್ಯ' ಎನ್ನುವುದೇ ಸೂಕ್ತವೆಂ
ಆತನ ಆಶಯವಾಗಿರಬೇಕು.

ಕವಿರಾಜಮಾರ್ಗದ ಹಿಂದಿನ ಸಂಸ್ಕರಣಗಳಿಗಿಂತ ಡಾ॥ ಕೆ. ಕೃಷ್ಣಮೂರ್ತಿಯವ
ಈ ಗ್ರಂಥ ಉತ್ತಮವೆಂಬುದು ನಿಸ್ಸಂಶಯ. ಮೂಲದ ಲಕ್ಷ್ಯ ಲಕ್ಷಣ ಶ್ಲೋಕಗಳನ
ಹೊಸಗನ್ನಡಕ್ಕೆ ಅನುವಾದಿಸಿರುವುದು ಮತ್ತು ಸಂಸ್ಕೃತ ಲಾಕ್ಷಣಿಕರ ಗ್ರಂಥಗಳೊಂದಿ
ತುಲನಾತ್ಮಕವಾಗಿ ವಿಮರ್ಶಿಸಿರುವುದು ಇದರ ಹಿರಿಮೆ. ಎರಡನೆಯ ಪರಿಚ್ಛೇದದ
ದುಷ್ಕರ ಕಾವ್ಯಬಂಧಗಳ ಉದಾಹರಣೆಗಳಿಗೆ ಮಾತ್ರ ಅರ್ಥವನ್ನು ಬರೆದಿಲ್ಲ
ಈ ದುಷ್ಕರ ಬಂಧಗಳು ಹಸ್ತಪ್ರತಿಗಳ ಲಿಪಿದೋಷದಿಂದ 'ಕಗ್ಗಂಟಾ'ಗಿರುವುದೇನೊ
ನಿಜ. ಅವುಗಳ ಲಕ್ಷಣಗಳನ್ನು ಗ್ರಂಥಕಾರನು ಹೇಳಿಲ್ಲ. ಆದರೆ ನಿರುತ್ತರ, ಭಾವ
ನುಸುಳು—ಮೊದಲಾದ ಬಂಧಗಳ ಸ್ವರೂಪವನ್ನು ವಿವರಿಸಲು ಯತ್ನಿಸಬಹ
ದಾಗಿತ್ತು. ಇರಲಿ.

ಪ್ರೊ॥ ಎಂ.ವಿ.ಸೀ.ಯವರು ಸಂಪಾದಿಸಿದ ಗ್ರಂಥದಲ್ಲಿ ವಿವರಣಾತ್ಮಕವಾ
ದೀರ್ಘ ಟಿಪ್ಪಣಿಗಳಿವೆ. ಸಂಬಂಧಪಟ್ಟ ಲಕ್ಷ್ಯ ಲಕ್ಷಣಗಳಿಗೆ ಭಾಮಹ, ದಂ
ಮೊದಲಾದವರು ಏನು ಹೇಳಿದ್ದಾರೆಂಬುದನ್ನು ಸ್ಫುಟವಾಗಿ ಉಲ್ಲೇಖಿಸಲಾಗಿದೆ
ಪದ್ಯಗಳಿಗೆ ಪ್ರತಿಪದಾನುವಾದವಿಲ್ಲವೆಂಬುದೊಂದೇ ಕೊರತೆಯಾಗಿತ್ತು. ಆ ಕೊರ
ಯನ್ನು ಡಾ॥ ಕೆ. ಕೃ. ಅವರು ತುಂಬಿದ್ದಾರೆ. ಕೆಲವು ಅಪಪಾಠಗಳಿಗೆ ಪರಿಷ್ಕರ
ವನ್ನೂ ಸೂಚಿಸಿದ್ದಾರೆ. ಇಷ್ಟು ಉತ್ತಮಪಡಿಸಲು ಪ್ರೊ॥ ಎಂ.ವಿ.ಸೀ.ಯವ
ಗ್ರಂಥದಿಂದ ಇವರಿಗೆ ತುಂಬ ನೆರವು ದೊರಕಿದೆಯೆಂಬುದು ನಿಶ್ಚಿತ. ಇವೆ
ಕವಿರಾಜಮಾರ್ಗದ ಪರಿಷ್ಕರಣದ ಕೆಲವು ಹಂತಗಳು. ಸರ್ವೋತ್ತಮವಾದ ಪರಿಷ್ಕರ
ವಿನ್ನೂ ಬರಬೇಕಾದ್ದಿದೆ. ಅದರ ಇನ್ನೊಂದು ಹಂತವಾಗಿ ಪ್ರಕೃತ ಗ್ರಂಥವನ
ಸ್ವಲ್ಪ ವಿಸ್ತಾರವಾಗಿಯೇ ಸಮೀಕ್ಷಿಸಬೇಕೆಂದು ನಮ್ಮ ಹಂಬಲ. ನಾವೀ
ಪ್ರಸ್ತಾವಿಸುವ ಲೋಪದೋಷಗಳಿಂದ ಮುಂದಿನ ಪರಿಷ್ಕರಣಕರ್ತರಿಗೆ ದಾರಿ ಸುಗವ
ವಾದೀತೆಂದು ನಂಬಿಕೆ. ಕೇವಲ ಸದ್ಭಾವನೆಯಿಂದ ಮಾಡುವ ಈ ಸಮೀಕ್ಷೆಯನ
ಡಾ॥ ಕೆ. ಕೃಷ್ಣಮೂರ್ತಿಯವರೂ ಅನ್ಯವಿದ್ವಜ್ಜನರೂ ಸಹೃದಯತೆಯಿಂದಲೆ
ಪರಿಶೀಲಿಸಬೇಕೆಂದು ಎಲ್ಲರಲ್ಲಿ ವಿನಯಪೂರ್ವಕ ಪ್ರಾರ್ಥನೆ. ಗ್ರಾಹ್ಯವೆನಿಸಿದ
ಸ್ವೀಕರಿಸಬಹುದು, ಇಲ್ಲವಾದರೆ ತೊರೆಯಬಹುದು. ಆಗ್ರಹವಾಗಲಿ, ವಾ
ಕುತೂಹಲವಾಗಲಿ ನಮಗೆ ಇಲ್ಲ. ಇನ್ನೊಂದು ಮಾತು. ಗ್ರಂಥಕಾರನು ಲಕ್ಷಣಗಳನ
ಪದ್ಯದಲ್ಲಿ ರಚಿಸಿರುವುದರಿಂದ, ಕೆಲವು ಅನಾವಶ್ಯಕ ಶಬ್ದಗಳನ್ನೂ ಲಕ್ಷಣ ಪದ್ಯದ
ಸೇರಿಸಿರುವುದುಂಟು. ಮೇಲ್ನೋಟಕ್ಕೆ ಹಾಗೆ ತೋರುವ ಎಲ್ಲವೂ ಅಂತಹವಲ್ಲ
ಕೆಲವು ಅರ್ಥವತ್ತಾದವೂ ಇವೆ.

**ಪ್ರಥಮ ಪರಿಚ್ಛೇದ**

೧. **ಪದ–ಪಾದ–ವಿಯುತ–ನಿಯಮಾಸ್ಪದಮಲ್ಲದಳಂಕೃತಂ ಕ್ರಿಯಾ–ಕಾರಕದೊಳ್।**
**ಪುದಿದರ್ಥವ್ಯಕ್ತಿಯನೀವುದು ಗದ್ಯಮನೇಕರೂಪ–ಭೇದ–ವಿಭಕ್ತಂ ॥**

(**ಪದ್ಯ ೨೫ ; ಪುಟ** 6)

ಇದು ಗದ್ಯ ಲಕ್ಷಣ. ಇದರ ಅನುವಾದ ಹೀಗಿದೆ—

"(ಛಂದಶ್ಶಾಸ್ತ್ರದಲ್ಲಿ ಹೇಳಿದ) ಪದ, ಪಾದಗಳ ನಿಯಮಗಳಿಗೆ ಒಳಗಾಗದಿದ್ದರೂ ಅಲಂಕಾರಗಳಿಂದ ಕೂಡಿ, ಕ್ರಿಯೆಗಳು (ನೇರವಾಗಿ) 'ಕಾರಕ'ಗಳೊಂದಿಗೆ (=ನಾಮ ವಿಭಕ್ತ್ಯಂತ ಪದಗಳೊಂದಿಗೆ) ಅನ್ವಯಿಸುವಂತೆ ಇರುತ್ತ, ಅರ್ಥಕೊಡುವುದೇ 'ಗದ್ಯ' (ಕಾವ್ಯ) ; ಮತ್ತೆ ಅದರಲ್ಲಿಯೂ ಅನೇಕ ಬಗೆಗಳಿರುತ್ತವೆ."

ಗದ್ಯದಲ್ಲಿ ಪಾದನಿಯಮವಿಲ್ಲವೆಂದರೆ ಅರ್ಥವಾಗುತ್ತದೆ. ಪದ ನಿಯಮವಿಲ್ಲ ಎಂದರೇನು ? ಇದು ಅಕ್ಷರಾನುವಾದವಲ್ಲವೆ ?

ಪದನಿಯಮವೆಂದರೆ ಯತಿನಿಯಮವೆಂದು ಗ್ರಂಥಕಾರನ ಅಭಿಪ್ರಾಯವಾಗಿರ ಬೇಕು. 'ಯತಿಯೆಂಬುದುಪಿರ್ವತಾಣಂ ಕೃತಾಸ್ಪದಂ ವೃತ್ತ ಜಾತಿ ಪದ ಪದ್ಧತಿ ಯೊಳ್' (ಪದ್ಯ. ೭೧). ವೃತ್ತಜಾತಿಗಳ ಪದಸ್ಥಾನದಲ್ಲಿ 'ಉಪಿರ್ವತಾಣಂ ಯತಿ'. ಯತಿಯು ಪದಾಂತದಲ್ಲಿ ಬರಬೇಕು, ಪದಮಧ್ಯದಲ್ಲಲ್ಲ. "ಶ್ಲೋಕೇಷು ನಿಯತ ಸ್ಥಾನಂ ಪದಚ್ಛೇದಂ ಯತಿಂ ವಿದುಃ" ಎಂದಿದ್ದಾನೆ ದಂಡಿ (II–೧೫). ಆದ್ದರಿಂದ ಪದನಿಯಮವೆಂದರೆ ಯತಿನಿಯಮವೆಂದು ನಮ್ಮ ನಂಬಿಕೆ.

"ಕ್ರಿಯೆಗಳು ನೇರವಾಗಿ ಕಾರಕಗಳೊಂದಿಗೆ ಅನ್ವಯಿಸುವುದು" ಎಂದರೇನು ? ಅವು ಸೊಟ್ಟಸೊಟ್ಟಾಗಿ ಅನ್ವಯಿಸುವುದೂ ಉಂಟೇನು ? ಮುಂದಿನ ಪದ್ಯದಲ್ಲಿ ಹೇಳುವ ಹರ್ಷಚರಿತೆ, ಕಾದಂಬರಿಗಳನ್ನು ಗ್ರಂಥಕಾರನು ಲಕ್ಷ್ಯದಲ್ಲಿಟ್ಟುಕೊಂಡಿದ್ದಾನೆ. ಗದ್ಯದಲ್ಲಿ ದೀರ್ಘವಾಕ್ಯಗಳಿದ್ದು, ಪೂರ್ಣಕ್ರಿಯಾವಾಚಿಯು ವಾಕ್ಯದಲ್ಲಿ ಒಂದೇ ಇದ್ದರೂ ಅಪೂರ್ಣಕ್ರಿಯಾವಾಚಿಗಳೂ ಅವುಗಳಿಗೆ ಸಂಬಂಧಿಸಿದ ಕಾರಕಗಳೂ ಪುಂಖಾನುಪುಂಖವಾಗಿ ಬರಬೇಕೆಂದು 'ಕ್ರಿಯಾ–ಕಾರಕದೊಳ್ ಪುದಿದು' ಎಂಬುದರ ಆಶಯ. ಹಾಗಿಲ್ಲದಿದ್ದರೆ ಈ ರೀತಿ ಹೇಳಿದ್ದು ನಿರರ್ಥಕವಾದೀತು.

೨. **ಪದನುಳ ಸಮ–ಸಂಸ್ಕೃತ–ಕಾವ್ಯದ ಹೃದಯಂ ಹರ್ಷಚರಿತ–ಕಾದಂಬರಿಗಳ್**
(**ಪ. ೨೬, ಪು.** 7).

ಇಲ್ಲಿ 'ಸಮ ಸಂಸ್ಕೃತ'ವೆಂದರೆ ಕನ್ನಡ ವೈಯಾಕರಣರು ಹೇಳುವ ಸಮಸಂಸ್ಕೃತ ಪದಗಳಲ್ಲ. ಸಂಸ್ಕೃತ ಕಾವ್ಯಕ್ಕೂ ಅದಕ್ಕೂ ಸಂಬಂಧವಿಲ್ಲ. ಇದು ತೊಡಕಿನ ಪ್ರಶ್ನೆ ಎಂದಿದ್ದಾರೆ ಪ್ರೊ॥ ಎಂ.ವಿ.ಸೀ. ಅವರು (ಪು. ೧೨೮). ಡಾ॥ ಕೆ. ಕೃ. ಅವರು ಉಪೇಕ್ಷಿಸಿದ್ದಾರೆ.

ನಮಗೆ ಹೀಗೆ ತೋರುತ್ತದೆ—ಹಿಂದಿನ ಪದ್ಯದಲ್ಲಿ ಗ್ರಂಥಕಾರನು ಗದ್ಯಲಕ್ಷಣ ವನ್ನು ಹೇಳಿದ್ದಾನೆ. ಅದಕ್ಕೆ ಸಮವಾದ ಸಂಸ್ಕೃತ ಕಾವ್ಯ—ಎಂದರೆ ಗದ್ಯಕಾವ್ಯ ಎಂದು ಅರ್ಥಮಾಡುವುದು ಸಮಂಜಸ ಅಥವಾ ಸಮಶಬ್ದಕ್ಕೆ ಸರ್ವ ಎಂಬ ಅರ್ಥವೂ ಉಂಟು. 'ಅಥ ಸಮಂ ಸರ್ವಂ'—ಅಮರ. ಸಮ ಸಂಸ್ಕೃತ ಕಾವ್ಯದ=ಸಮಸ್ತ ಸಂಸ್ಕೃತ ಕಾವ್ಯದ.

೩. ಕಾವ್ಯಲಕ್ಷಣವನ್ನು ಹೇಳುತ್ತ 'ಸವಿಶೇಷ ಶಬ್ದರಚನಂ' ಎಂದಿದ್ದಾನೆ ಗ್ರಂಥಕಾರ (ಪು. ೨೨). ಇದಕ್ಕೆ ಅರ್ಥವನ್ನು ಬರೆಯುತ್ತ 'ವಿಶೇಷತೆಯಿರುವ ಶಬ್ದಗಳಿಂದ ರಚಿತವಾದುದು' ಎಂದಿದ್ದಾರೆ ಅನುವಾದಕರು (ಪು. 6).

ಇದು ಅಕ್ಷರಾನುವಾದವಲ್ಲವೆ? 'ವಿಶೇಷತೆ'ಯಲ್ಲಿರುವ 'ತೆ' ಮಾತ್ರ ಇಲ್ಲಿಯು ವಿಶೇಷ. ವಿಶೇಷವೆಂದರೆ ಮಾಧುರ್ಯಾದಿ ಕಾವ್ಯಗುಣ. ಇಂತಹ ಕಾವ್ಯಗುಣವಿಶಿಷ್ಟ ವಾದ ಪದರಚನೆಯುಳ್ಳದ್ದು ಕಾವ್ಯವೆಂದರ್ಥ. 'ವಿಶಿಷ್ಟಾಪದರಚನಾ ರೀತಿಃ. ವಿಶೇಷೋ ಗುಣಾತ್ಮಾ' ಎಂದಿದ್ದಾನೆ ವಾಮನ. ಅದನ್ನೇ ಮಾರ್ಗಕಾರನು 'ಸವಿಶೇಷ ಶಬ್ದರಚನಂ' ಎಂದು ಬದಲಾಯಿಸಿ ಹೇಳಿದ್ದಾನೆಂಬುದು ಸ್ಫುಟ.

೪. ೫೧ನೆಯ ಪದ್ಯದಲ್ಲಿ 'ಸಮಸಂಸ್ಕೃತ' ಶಬ್ದಕ್ಕೆ 'ಸಮವಾಗಿರುವ ಸಂಸ್ಕೃತ' ಎಂದೂ ೫೫ನೆಯ ಪದ್ಯದಲ್ಲಿ 'ಸರಿಸಮವಾಗಿರುವ ಸಂಸ್ಕೃತೋಕ್ತಿ' ಎಂದೂ ಅರ್ಥ ಬರೆದಿದ್ದಾರೆ (ಪು. 13, 14). ಸಮಸಂಸ್ಕೃತ ಎಂಬುದು ಕನ್ನಡ ವ್ಯಾಕರಣದಲ್ಲಿ ಒಂದು ಪಾರಿಭಾಷಿಕ ಶಬ್ದ. ಕೇಶಿರಾಜನು ಇದರ ಲಕ್ಷಣವನ್ನು—

**ಸಮುದಿತಸಂಖ್ಯಾವ್ಯಯರಹಿ**
**ತಮೆನಿಸಿ ವರ್ತಿಪ ನಿಘಂಟುವಿನ ನಾಮಪದೋ ।**
**ತ್ತಮವರ್ಣಪ್ರಕೃತಿಗಳಂ**
**ಸಮಸಂಸ್ಕೃತವೆಸರನಿಟ್ಟು ಲಿಂಗಂ ಮಾಳ್ಪರ್ ॥**

ಎಂದು ಹೇಳಿದ್ದಾನೆ (ಶ–ದ. ಸೂ ೯೦). ಈ ವಿಷಯವನ್ನೇ ಎತ್ತದೆ 'ಸಮವಾಗಿರುವ ಸಂಸ್ಕೃತ' ಎಂದು ಬರೆದರೆ ಏನು ಹೇಳಿದಹಾಗಾಯಿತು? ಓದುಗನಿಗೆ ಯಾವ ಅರ್ಥವೂ ಅದರಿಂದಾಗುವುದಿಲ್ಲ.

೫೨ನೆಯ ಪದ್ಯದಲ್ಲಿ ಗ್ರಂಥಕಾರನು ಕನ್ನಡದಲ್ಲಿ ಬೆರಸಬಾರದ ಸಂಸ್ಕೃತ ಅವ್ಯಯ ಗಳನ್ನು ಹೇಳುತ್ತ 'ಅಪರಹರುಚ್ಚೈರ್ನೀಚೈಃ...ಸಹಸಾದಿಗಳವ್ಯಯಂಗಳಸಹಾಯಂ ಗಳ್' ಎಂದಿದ್ದಾನೆ. 'ಅಸಹಾಯಂಗಳ್' ಎಂಬುದಕ್ಕೆ ಅನುವಾದಕರು "ಅವುಗಳಿಗೆ ಸಹಾಯಕ ಕನ್ನಡ (ವಿಭಕ್ತಿ) ಪ್ರತ್ಯಯಗಳು ಭಾರವು" ಎಂದು ಬರೆದಿದ್ದಾರೆ. ಮಹಾಪ್ರಾಣ 'ಭ'ಕಾರ ಇಲ್ಲಿ ಮುದ್ರಣದೋಷದಿಂದಾಗಿರಬೇಕು. 'ಬಾರವು' ಎಂಬ ಅಲ್ಪಪ್ರಾಣವಾಗಿರಬಹುದು. ಆದರೆ ಈ ಅರ್ಥ ಸರಿಯಲ್ಲ. "ಈ ಅವ್ಯಯಗಳಿಗೆ ವಿಭಕ್ತಿ ಪ್ರತ್ಯಯಗಳು ಬಾರವು" ಎಂದರೆ 'ವಿಭಕ್ತಿ ಪ್ರತ್ಯಯಗಳನ್ನು ಸೇರಿಸದೆಯೇ ಇವನ್ನು ಪ್ರಯೋಗಿಸಬೇಕು' ಎಂಬ ವಿಪರೀತಾರ್ಥವೇ ಹೊಮ್ಮುತ್ತದೆ.

ಈ ದೋಷಕ್ಕೆ ಉದಾಹರಣೆಯಾಗಿ ಕೊಟ್ಟ ಮುಂದಿನ ಪದ್ಯದಲ್ಲಿ 'ಅಪರಹಂ', 'ಇತಸ್ತತಂ' ಎಂಬಲ್ಲಿ ವಿಭಕ್ತಿಪ್ರತ್ಯಯ ಇದೆ. 'ಬಹಿರಂತಃ' 'ಸಹಸಾ' 'ಅಹೋ' ಎಂಬಲ್ಲಿ ಇಲ್ಲ. 'ಉಭಯಂತಸ್ಪಾಶಾ ರಜ್ಜುಃ'

ಅಸಹಾಯ. ಕೇವಲ-ಎಂಬೆರಡು ಶಬ್ದಗಳು ವ್ಯಾಕರಣಶಾಸ್ತ್ರದಲ್ಲಿ ಪಾರಿಭಾಷಿಕವಾಗಿ ಬಳಸತಕ್ಕವು. ಯಾವ ಶಬ್ದಕ್ಕೆ ಸಮಾಸ ಘಟಕವಾದ ಇನ್ನೊಂದು ಶಬ್ದದ ಸಹಾಯವಿಲ್ಲವೋ ಅದು ಅಸಹಾಯ, ಅದೇ ಕೇವಲ. ಸಂಸ್ಕೃತ ವ್ಯಾಕರಣದಲ್ಲಿ ಇದು ಸುಪ್ರಸಿದ್ಧ. ಪ್ರಕೃತದಲ್ಲಿ, ಸಮಾಸವಾಗದಿರುವ ವ್ಯಸ್ತಶಬ್ದ ಎಂದರ್ಥ. ಒಂಟಿ ಶಬ್ದ ಎನ್ನಬಹುದು. ಸಮಾಸ ಮಾಡದೆ ಸಂಸ್ಕೃತಾವ್ಯಯಗಳನ್ನು ಕನ್ನಡದಲ್ಲಿ ಪ್ರಯೋಗಿಸಬಾರದೆಂದು ನಿಯಮ. ಅಂತೆಯೇ ದೋಷವಿಲ್ಲದ್ದಕ್ಕೆ ಉದಾಹರಣೆಯಾಗಿ ಗ್ರಂಥಕಾರನು ಮುಂದಿನ ೫೬ನೆಯ ಪದ್ಯದಲ್ಲಿ 'ಬಹಿರುದ್ಯಾನಾಂತರ' 'ಸಹಸೋದಿತ ಮತ್ತಕೋಕಿಲೋಚ್ಚೈರ್ಧ್ವಾನ' 'ಮುಹುರಾಕರ್ಣಿಸೆ'-ಎಂದು ಪ್ರಯೋಗಿಸಿ ತೋರಿಸಿದ್ದಾನೆ. 'ಮುಹುರಾಕರ್ಣಿಸೆ' ಎಂಬುದು ಕ್ರಿಯಾಸಮಾಸ. ಇದನ್ನೇ ಕೇಶಿರಾಜನು ಇನ್ನೂ ವಿಸ್ತರಿಸಿದ್ದಾನೆ (ನೋಡಿ. ಶ-ದ. ಸೂ ೯೧, ೯೨).

೫೨ನೆಯ ಪದ್ಯಾನುವಾದದಲ್ಲಿ 'ಮುಂತಾದವು ಅವ್ಯಯಗಳು' ಎಂದು ಉದ್ದೇಶ್ಯ ವಿಧೇಯಭಾವದಿಂದ ಅರ್ಥವನ್ನು ಬರೆದದ್ದೂ ಸರಿಯಲ್ಲ. ಇವುಗಳಿಗೆ ಅವ್ಯಯ ಸಂಜ್ಞೆಯನ್ನೇನೂ ಗ್ರಂಥಕಾರನು ವಿಧಿಸುತ್ತಿಲ್ಲವಷ್ಟೆ? ಕನ್ನಡದಲ್ಲಿ ಬೆರಸಬಾರದ ಅವ್ಯಯಗಳ ಪಟ್ಟಿಯನ್ನು ಒದಗಿಸುತ್ತಿದ್ದಾನೆ, ಅಷ್ಟೆ. 'ಅಸಮಸ್ತವಾದ ಈ ಬಗೆಯ ಅವ್ಯಯಗಳು' ಎಂದಿಷ್ಟೇ ಅರ್ಥ.

ವಿಚಾರ :—ಗ್ರಂಥಕಾರನು ಹೇಳಿದ 'ಅಪರಹಃ' ಎಂಬುದು ಅವ್ಯಯವಲ್ಲ. ಅಹನ್ ಶಬ್ದಕ್ಕೆ ವೀಪ್ಸಾರ್ಥದಲ್ಲಿ ದ್ವಿತ್ವ ಬಂದು ಈ ರೂಪವಾಗಿದೆ. ಆದ್ದರಿಂದ "ಅಹರಹಃ ಎಂಬ ಶಬ್ದ, ಉಚ್ಚೈಃ—ಮೊದಲಾದ ಅವ್ಯಯಗಳು' ಎಂದು ಬಿಡಿಸಿ ಅರ್ಥ ಹೇಳುವುದು ಯುಕ್ತ.

೫. **ಕಾರಕಮಾಜು ಕರ್ಮ-ಕರಣಾದಿಕದಿಂ ಪೃಥಮಾದಿ-ಭೇದ-ನಿ-**
**ರ್ಧಾರಣದಿಂದದಂ ಪಿಡಿದು ನಿಲ್ವ ವಿಭಕ್ತಿಗಳೇಟೆನಿಕ್ಕುಂ ॥ (ಪ. ೧೧೪, ಪು. 29)**

"ಕನ್ನಡದಲ್ಲಿ ಷಷ್ಠಿಗೂ ಕಾರಕತ್ವವುಂಟೆನ್ನುವುದಾದರೆ ಕರ್ತೃವಿಗೆ ಕಾರಕತ್ವವಿಲ್ಲವೆಂದು ಭಾವಿಸಬೇಕು" ಎಂದಿದ್ದಾರೆ ಅನುವಾದಕರು.

ಇಲ್ಲಿ 'ರೆ' ಪಕ್ಷ ಹುಟ್ಟಿದ್ದೇಕೆ? ಡಾ॥ ಕೆ. ಕೃಷ್ಣಮೂರ್ತಿಗಳಂಥ ವಿದ್ವಾಂಸರೂ ಈ ಪಕ್ಷವನ್ನು ಜೀವಂತ ಉಳಿಸಿದ್ದರಿಂದ ನಮಗೆ ಸಖೇದಾಶ್ಚರ್ಯವಾಗಿದೆ. ಈ ವಿಷಯವಾಗಿ ವಾದವಿವಾದಗಳು ನಡೆದಿವೆ. ಪ್ರೊ॥ ಎಂ.ವಿ.ಸೀ.ಯವರು ಈ ಪದ್ಯದ ಟಿಪ್ಪಣಿಯಲ್ಲಿ ಸುದೀರ್ಘವಾಗಿಯೇ ನಿರೂಪಿಸಿದ್ದಾರೆ. ಅನೇಕ ವಿದ್ವಜ್ಜನರ ಅಭಿಪ್ರಾಯಗಳನ್ನು ಸಂಗ್ರಹಿಸಿ ಕೊಟ್ಟಿದ್ದಾರೆ.

ಕಾರಕಸಂಜ್ಞೆ ಸಂಸ್ಕೃತ ವ್ಯಾಕರಣದಲ್ಲಿ ಆವಶ್ಯಕ. ಉದಾತ್ತಾದಿ ಸ್ವರವಿಧಿಯಲ್ಲಿ, ಸಮಾಸವಿಧಿಯಲ್ಲಿ, ಉತ್ಸರ್ಗಾಪವಾದ ವ್ಯವಸ್ಥೆಯಲ್ಲಿ ಅದು ಉಪಯುಕ್ತವಾಗಿದೆ. ಕನ್ನಡ ವ್ಯಾಕರಣದಲ್ಲಿ ಕಾರಕಸಂಜ್ಞೆಯಿಂದ ಉಪಯೋಗವೇನೂ ಇಲ್ಲ. ಆದರೂ ಸಂಸ್ಕೃತವ್ಯಾಕರಣವನ್ನನುಸರಿಸಿದ ಕನ್ನಡ ವೈಯಾಕರಣರು ಕರ್ತೃ, ಕರ್ಮ ಮೊದಲಾದವನ್ನು ಕಾರಕವೆಂದು ಹೇಳಿ, ಆ ಶಬ್ದದಿಂದ ವ್ಯವಹರಿಸಿದ್ದಾರೆ. ಕರ್ತೃವಿಗೆ ಕಾರಕ ಸಂಜ್ಞೆ ಇರಲಿ–ಇಲ್ಲದಿರಲಿ, ಷಷ್ಠಿ ಕಾರಕವಿಭಕ್ತಿಯಾಗಲಿ–ಆಗದಿರಲಿ ಕನ್ನಡ ವ್ಯಾಕರಣದವರಿಗೆ ಆಗಬೇಕಾದ್ದೇನೂ ಇಲ್ಲ. ಸಂಸ್ಕೃತ ವ್ಯಾಕರಣದಲ್ಲಿ ವ್ಯವಸ್ಥಿತವಾದ ಕಾರಕತ್ವವನ್ನು ಇವರು ಸಿದ್ಧವೆಂದು ಅನುವಾದ ಮಾಡಿದ್ದಾರೆಯೇ ಹೊರತು, ಕಾರಕವೆಂದರೇನೆಂಬ ನೂತನ ವ್ಯವಸ್ಥೆಗೆ ಇವರು ಹೊರಟೇ ಇಲ್ಲ. ಭಟ್ಟಾಕಳಂಕನು ಶಬ್ದಾನುಶಾಸನದಲ್ಲಿ "ನಾವು ಕಾರಕ ಎಂಬ ಸಂಜ್ಞೆಯನ್ನು ಮಾಡದಿದ್ದರೂ

**ಕರ್ತಾ ಕರ್ಮ ಚ ಕರಣಂ ಸಂಪ್ರದಾನಂ ತಥೈವ ಚ ।**
**ಅಪಾದಾನಂ ಚಾಧಿಕರಣಂ ಷಡ್ವಿಧಂ ಕಾರಕಂ ಮತಂ ॥**

ಎಂದು ಪ್ರಾಚೀನರು ಪರಿಗಣಿಸಿರುವ ಕರ್ತ್ರಾದಿ ಆರರಲ್ಲಿಯೂ ಕಾರಕ ಶಬ್ದವು ಸಮಾನಾಧಿಕರಣ ಸಂಬಂಧದಿಂದ ಈ ಶಾಸ್ತ್ರದಲ್ಲಿ ಪ್ರಯೋಗವಿದೆ" ಎಂದು ಸ್ಪಷ್ಟವಾಗಿ ಬರೆದಿದ್ದಾನೆ (ಕರ್ಣಾಟಕ ಶಬ್ದಾನುಶಾಸನ ಪ್ರಕಾಶಿಕೆ. ಶಿ. ಶಿ. ಬಸವನಾಳ ಸಂಪಾದಿತ, ಪು. ೨೦೪). ಹಾಗೆಯೇ ಕರ್ತೃ. ಕರ್ಮ. ಕರಣಾದಿಗಳ ಲಕ್ಷಣವನ್ನೂ ಹೇಳಿಲ್ಲ, ಸುಪ್ರಸಿದ್ಧವೆಂಬ ಕಾರಣದಿಂದ. ಕೇಶಿರಾಜನು

**ಪ್ರವಿದಿತ ತತ್ಕರ್ಮಂ ಕ-**
**ರ್ತೃವಿನೀಪ್ಸಿತತಮ ಪದಾರ್ಥಮದು...॥ (ಸೂ. ೧೩೮)**

ಎಂದು ಕರ್ಮದ ಸಾಮಾನ್ಯ ಲಕ್ಷಣವನ್ನು ಹೇಳಿದನೇ ಹೊರತು ಕರ್ತೃ. ಕರಣ. ಸಂಪ್ರದಾನ ಮೊದಲಾದವುಗಳಿಗೂ ಕಾರಕಕ್ಕೂ ಲಕ್ಷಣವನ್ನು ಹೇಳಲೇ ಇಲ್ಲ. ಇದರಿಂದ ಸಿದ್ಧವಾಗುವುದೇನೆಂದರೆ ಕನ್ನಡದವರು ಸಂಸ್ಕೃತ ವ್ಯಾಕರಣದಿಂದ ಕಾರಕ, ಕರ್ತೃ, ಕರ್ಮ–ಮೊದಲಾದವನ್ನು ಉಂಡೆಯಾಗಿ ತೆಗೆದುಕೊಂಡಿದ್ದಾರೇ ಹೊರತು ಸ್ವತಂತ್ರವಾಗಿ ಬೇರೊಂದು ವ್ಯವಸ್ಥೆಯನ್ನು ಒಪ್ಪಿಕೊಂಡಿಲ್ಲ ಎಂದು. ಕನ್ನಡ ವೈಯಾಕರಣರೆಲ್ಲರೂ ಕರ್ತೃವನ್ನು ಕಾರಕವೆಂದೇ ತಿಳಿದಿದ್ದಾರೆ.

೧. "ನಾಗವರ್ಮ ಕೇಶಿರಾಜರಿಬ್ಬರೂ ಕರ್ತೃ ಮೊದಲಾಗಿ ಕಾರಕಗಳು ಆರು ಎಂದೂ ವಿಭಕ್ತಿಗಳು ಏಳು ಎಂದೂ ಸ್ಪಷ್ಟವಾಗಿ ಹೇಳಿದ್ದಾರೆ; ಷಷ್ಠಿಗೆ ಕಾರಕತ್ವ ವಿಲ್ಲವೆಂಬ ಬಗೆಗೂ ಅವರದ್ದು ಏಕಾಭಿಪ್ರಾಯ" (ಪ್ರೊ॥ ಎಂ.ವಿ.ಸೀ.ಯವರ ಟಿಪ್ಪಣಿ, ಪು. ೧೬೬).

ಕೇಶಿರಾಜ ನಾಗವರ್ಮರ ಹೇಳಿಕೆಯನ್ನಿಲ್ಲಿ ಮತ್ತೆ ಬರೆಯುವುದು ಅನಾವಶ್ಯಕ. 'ಷಷ್ಠಿಗೆ ಕಾರಕತ್ವವಿಲ್ಲ' ಎಂಬ ವಿಷಯದಲ್ಲಿ ಮುಂದೆ ಬರೆಯುತ್ತೇವೆ.

## ಕಾರಕ ವಿಚಾರ

೨. ಭಟ್ಟಾಕಳಂಕನು ಕರ್ತೃ ಕಾರಕವೆಂದು ಒಪ್ಪಿದ್ದಾನೆಂಬುದು ಮೇಲೆ ಉದ್ಧೃತವಾದ ವ್ಯಾಖ್ಯಾನದಿಂದ ಸ್ಪಷ್ಟ.

ಹೀಗೆ ಎಲ್ಲ ವೈಯಾಕರಣರೂ ಏಕಾಭಿಪ್ರಾಯದಲ್ಲಿರುವಾಗ, ಕವಿರಾಜಮಾರ್ಗಕಾರನಿಗೆ 'ಕರ್ತೃ ಕಾರಕವೆಂಬುದು ಸಂಮತವಲ್ಲ' ಎಂಬ ವಾದಕ್ಕೆ ನಿಮಿತ್ತವೇನು? ಅದು ಕಾರಕವಲ್ಲವೆಂದು ಅವನೇನೂ ಹೇಳಿಲ್ಲ. ಅವನದು ಅಲಂಕಾರ ಗ್ರಂಥ. ವ್ಯಾಕರಣ ವಿಷಯ ಪ್ರಾಸಂಗಿಕವಾಗಿ ಸ್ವಲ್ಪ ಬಂದಿದೆಯಷ್ಟೆ. ಷಷ್ಠಿಯು ಕಾರಕ ವಿಭಕ್ತಿಯೆಂದೂ ಅವನು ಹೇಳಿಲ್ಲ. ಅವನು ಹೇಳದೆ ಇದ್ದುದನ್ನು ಬರಿಯ ಊಹೆಯಿಂದ ತಿರುವು ಮುರುವು ಮಾಡಿ ಅವನಲ್ಲಿ ಆರೋಪಿಸಿ, ವ್ಯಾಕರಣ ಸಿದ್ಧಾಂತಕ್ಕೇ ಅಪಚಾರವೆಸಗುವ ಈ ವಾದವೈಖರಿಗೆ ಬೀಜವೇನು? ಕವಿರಾಜಮಾರ್ಗಕಾರನು ಪ್ರಾಚೀನರ ಮೇಲೆ ತಿರುಗಿಬಿದ್ದ ಬಂಡಾಯಗಾರನೆಂದು ಭಾವಿಸಬೇಕೆ?

> **ಕಾರಕಮಾಱು ಕರ್ಮ-ಕರಣಾದಿಕದಿಂ ಪ್ರಥಮಾದಿ ಭೇದ-ನಿ**
> **ರ್ಧಾರಣದಿಂದದಂ ಪಿಡಿವ ನಿಲ್ಕ ವಿಭಕ್ತಿಗಳೇೞನಿಕ್ಕುಂ ॥**

ಇಷ್ಟೇ ಅವನು ಹೇಳಿದ್ದು. ಉದಾಹರಣೆಯಾಗಿ,—

> **ನರಪತಿ ಬಂದನಾ ನೃಪನನಱ್ತಿಯೆ ಕಾಣ್ಬುದು ।**
> **............ಇದು ಕಾರಕಯುಕ್ತವಿಭಕ್ತ್ಯನುಕ್ರಮಂ ॥**

ಎಂದು ಏಳು ವಿಭಕ್ತಿಗಳ ಪ್ರಯೋಗವನ್ನು ತೋರಿಸಿದ್ದಾನೆ. ಇದರ ಮೇಲೆ ಪ್ರೊ॥ ಎಂ.ವಿ.ಸೀ.ಯವರ ಟಿಪ್ಪಣಿ ಹೀಗಿದೆ: "ಮಾರ್ಗಕಾರನು ಕರ್ತೃವನ್ನು ಕಾರಕಾನುಕ್ರಮದಲ್ಲಿ ಸೇರಿಸಿಲ್ಲ: ಹಾಗೂ, ಕಾರಕಗಳು ಆರೆಂದು ಸ್ಪಷ್ಟವಾಗಿ ಹೇಳಿ, 'ಇದು ಕಾರಕಯುಕ್ತ ವಿಭಕ್ತ್ಯನುಕ್ರಮಂ' ಎಂದು ಉಪಲಕ್ಷಿಸುವಲ್ಲಿ ಷಷ್ಠಿಯನ್ನು ಆ 'ಅನುಕ್ರಮ'ದಲ್ಲಿ ಸೇರಿಸಿಕೊಂಡಿರುವುದರಿಂದ ಅವನು ಷಷ್ಠಿಗೂ ಕಾರಕತ್ವವನ್ನು ಆರೋಪಿಸಿರುವನೆಂದು ಅನುಮಾನಿಸಬೇಕಾಗುತ್ತದೆ. ಅವನ ಅಭಿಪ್ರಾಯದಂತೆ, ಕರ್ತೃಕಾರಕವಲ್ಲದಿದ್ದರೂ ಅದು ಪ್ರಥಮಾ ವಿಭಕ್ತಿಯಿಂದ ನಿರ್ದಿಷ್ಟವಾಗಿ, ವಿಭಕ್ತಿಗಳು ಏಳು; ಇದರಲ್ಲಿ ಸಂದೇಹವಿಲ್ಲ." (ಪು. ೧೬೬).

ಕರ್ತೃವಿಗೂ ಪ್ರಥಮಾ ವಿಭಕ್ತಿಗೂ ಗಂಟುಹಾಕಿಕೊಂಡದ್ದರಿಂದ ಈ ರಾದ್ಧಾಂತ. ಕರ್ತೃಕಾರಕದ ಮೇಲೆ ಪ್ರಥಮಾ ವಿಭಕ್ತಿ ಬರುತ್ತದೆಯೆಂದು ಯಾವ ವೈಯಾಕರಣನೂ ಹೇಳಿಲ್ಲ. ಕೇಶಿರಾಜನು,—

> **ಅಭಿರೂಪದಿನಾ ಪ್ರಥಮಾ**
> **ವಿಭಕ್ತಿ ಲಿಂಗಾರ್ಥವಚನಸಂಬೋಧನದೊಳ್,**
> **ಪ್ರಭವಿಪ್ಪುದಾ ದ್ವಿತೀಯಾ**
> **ವಿಭಕ್ತಿ ಕರ್ಮದೊಳನಾಕುಲಂ ವರ್ತಿಸುಗುಂ ॥ (ಸೂ. ೧೩೭)**

ಎಂದು ಮಾತ್ರ ಹೇಳಿದ್ದಾನೆ. ಪ್ರಥಮೆಯು ಪ್ರಾತಿಪದಿಕಾರ್ಥದಲ್ಲಿ ಬರುತ್ತದೆಯೇ

ಹೊರತು ಕರ್ತ್ರರ್ಥವಲ್ಲಲ್ಲ. ಕರ್ತ್ರರ್ಥದಲ್ಲಿ ತೃತೀಯೆಯನ್ನು ಹೇಳಿದ್ದಾನೆ ಕೇಶಿರಾ

**ನುಡಿಗುಂ ತೃತೀಯೆ ಪೇೞಲ್**
**ಪಡೆಗುಂ ಸಲೆ ಕರ್ತೃಕರಣಹೇತುಸ್ಥಿತಿಯೊಳ್ ॥ (ಸೂ. ೧೪೯ )**

**ಉದಾ.–ಕರ್ತೃವಿಂಗೆ: ಪವಕವಾಕ್ಯಸಾಲೆಯಿಂ ಮಾಡೆಪಟ್ಟುದು; ಕಾವ್ಯಮೆನ್ನಿಂ ಪೇ ಪಟ್ಟುದು.**

ಇಲ್ಲಿ ಕರ್ಮಣಿ ಪ್ರಯೋಗವನ್ನು ಮಾತ್ರ ಉದಾಹರಿಸಿದ್ದಾನೆಂಬುದು ಗಮ ನಾರ್ಹ. ಏಕೆಂದರೆ, ಕರ್ತರಿ ಪ್ರಯೋಗದಲ್ಲಿ ಕರ್ತೃ ಪ್ರಥಮೆಯ ಅರ್ಥವ ಭಟ್ಟಾಕಳಂಕನು ಕೇಶಿರಾಜನಿಗಿಂತ ಪರಿಷ್ಕಾರವಾಗಿ ವಿವರಿಸಿದ್ದಾನೆ. ಇಲ್ಲಿ ಬರೆ ತುಂಬ ವಿಸ್ತಾರವಾಗುತ್ತದೆ. ಮಥಿತಾರ್ಥ ಇಷ್ಟು–

೧. ಕರ್ತೃಕಾರಕಕ್ಕೂ ಪ್ರಥಮಾ ವಿಭಕ್ತಿಗೂ ಯಾವ ಸಂಬಂಧವೂ ಇಲ್ಲ.

೨. ಕರ್ತ್ರರ್ಥದಲ್ಲಿ ತೃತೀಯೆ ಬರುತ್ತದೆ, ಪ್ರಥಮೆಯಲ್ಲ.

ಹಾಗಾದರೆ, 'ರಾಮನು ಗಡಿಗೆಯನ್ನು ಮಾಡುತ್ತಾನೆ' ಎಂಬಲ್ಲಿ ಕರ್ತೃವನ ಬೋಧಿಸತಕ್ಕದ್ದು ಯಾವುದು ? ವ್ಯಾಕರಣಶಾಸ್ತ್ರದಂತೆ ಇಲ್ಲಿ ಆಖ್ಯಾತಪ್ರತ್ಯಯ ಕರ್ತೃವನ್ನು ಬೋಧಿಸುತ್ತದೆ. ಆದ್ದರಿಂದಲೇ ಇದಕ್ಕೆ 'ಕರ್ತರಿ' ಪ್ರಯೋಗ ಎಂ ಹೆಸರು. ಪ್ರಥಮೆಗೆ ಪ್ರಾತಿಪದಿಕದ ಅರ್ಥವೇ ಅರ್ಥ. ಆಖ್ಯಾತಪ್ರತ್ಯಯ ಕರ್ತೃವನ್ನು ಬೋಧಿಸುವುದರಿಂದ ಮತ್ತೆ ತೃತೀಯೆ ಬರುವುದಿಲ್ಲ. ಕರ್ಮ ಪ್ರಯೋಗದಲ್ಲಿ ಕರ್ಮವನ್ನು ಆಖ್ಯಾತಪ್ರತ್ಯಯವೇ ಬೋಧಿಸುತ್ತದೆ. 'ರಾಮನಿಂ ಗಡಿಗೆ ಮಾಡಲ್ಪಡುತ್ತದೆ.' ಇಲ್ಲಿ ಗಡಿಗೆ ಕರ್ಮವಾದರೂ ದ್ವಿತೀಯೆ ಬಂದಿ ವೆಂಬುದನ್ನು ಗಮನಿಸಬೇಕು. ಕರ್ತ್ರರ್ಥವನ್ನು ಆಖ್ಯಾತವು ಇಲ್ಲಿ ಹೇಳುವುದಿ ವಾದ್ದರಿಂದ 'ರಾಮ' ಶಬ್ದದ ಮೇಲೆ ಕರ್ಮಣಿ ಪ್ರಯೋಗದಲ್ಲಿ ತೃತೀಯೆ ಬಂದಿ ಎಂಬುದನ್ನು ಗಮನಿಸಬೇಕು.

ಏವಂಚ ಪ್ರಥಮೆಗೂ ಕರ್ತೃಕಾರಕಕ್ಕೂ ಸಂಬಂಧವಿಲ್ಲದಮೇಲೆ, ಮುಂದೆ ಬ ವುದು ದ್ವಿತೀಯೆ. ಅದು ಕರ್ಮಕಾರಕದ ಮೇಲೆ ಬರುವುದರಿಂದ ಕಾರಕಕ್ರಮದ ಮೊದಲು ಕರ್ಮವನ್ನು ಕವಿರಾಜಮಾರ್ಗಕಾರನು ಹೇಳಿದ್ದು ಕ್ರಮಬದ್ಧವೇ ಆಗಿ ವಿಭಕ್ತಿಕ್ರಮದಲ್ಲಿ ಪ್ರಥಮೆಯಿಂದ ಉದಾಹರಣೆ ಕೊಟ್ಟಿದ್ದೂ ಸರಿ.

ಇಲ್ಲೊಂದು ಪ್ರಶ್ನೆ ಏಳುತ್ತದೆ. ಪ್ರಥಮೆಯೂ ಷಷ್ಠಿಯೂ ಕಾರಕವಿಭ ಗಳಲ್ಲದೇ ಹೋದರೆ, ಆರು ಕಾರಕಗಳಿಗೆ ಐದೇ ವಿಭಕ್ತಿಗಳು ಉಳಿಯುತ್ತವಲ್ಲ ಅದರಿಂದ ಏನಾಯಿತು ? ಕರ್ತೃ ಕರಣ—ಈ ಎರಡು ಕಾರಕಗಳಲ್ಲಿಯೂ ತೃತೀಯ ವಿಭಕ್ತಿಯೇ ವರ್ತಿಸುವುದರಿಂದ ಇದು ಚೋದ್ಯವೇ ಅಲ್ಲ. 'ತೃತೀಯೆ ಪೇೞ ಪಡೆಗುಂ ಕರ್ತೃಕರಣಹೇತುಸ್ಥಿತಿಯೊಳ್' ಎಂಬ ಕೇಶಿರಾಜನ ಸೂತ್ರವನ್ನು ಸ್ಮರಿ ಕೊಳ್ಳಬೇಕು. 'ಕರ್ತೃಕರಣಯೋಸ್ತೃತೀಯಾ'–ಪಾಣಿನಿಸೂತ್ರ.

ಈಗ ಇನ್ನೊಂದು ಶಂಕೆ ಹುಟ್ಟಬಹುದು. ಕಾರಕ ವಿಭಕ್ತಿಗಳು ಐದೇ ಆದರೆ ಗ್ರಂಥಕಾರನು ಏಳು ವಿಭಕ್ತಿಗಳಿಗೆ ಉದಾಹರಣೆ ಕೊಟ್ಟಿದ್ದೇಕೆ? ಎಂದು. 'ಏಳು ವಿಭಕ್ತಿಗಳಿಗೆ ಏಳು ಉದಾಹರಣೆಗಳು' ಎಂಬ ಉತ್ತರವನ್ನು ಸುಲಭವಾಗಿ ಊಹಿಸಿಕೊಳ್ಳಬಹುದು. ಪ್ರತಿವಾದಿಗಳ ಪಕ್ಷದಲ್ಲಿಯೂ ಆರು ಕಾರಕಗಳಿಗೆ ಏಳು ವಿಭಕ್ತಿಗಳೆಂಬುದು ಕೂಡುವುದಿಲ್ಲವಷ್ಟೆ. ಅವರ ಮತದಲ್ಲಿಯೂ ಕರ್ತೃ ಕಾರಕವಲ್ಲವಾದರೆ, 'ನರಪತಿ ಬಂದನ್' ಎಂಬುದು ಯಾವುದಕ್ಕೆ ಉದಾಹರಣೆ? ಪದ್ಯದ ಮೊದಲಲ್ಲಿಯೇ ಅಸಂಬದ್ಧವಾದದ್ದನ್ನು ಉದಾಹರಿಸಬಹುದೆ? ಅಲ್ಲಿ ಪ್ರಥಮಾವಿಭಕ್ತಿ ಹುಟ್ಟಿಯೇ ಇಲ್ಲವೆಂದು ಭಾಷಾಶಾಸ್ತ್ರಜ್ಞರ ಮತವನ್ನು ಎತ್ತುವುದಾದರೆ, ಏಳು ವಿಭಕ್ತಿಗಳಲ್ಲಿ ಇನ್ನೊಂದು ಯಾವುದು? ಏಳು ವಿಭಕ್ತಿಗಳೆಂದು ಗ್ರಂಥಕಾರನು ಕಂಠೋಕ್ತವಾಗಿ ಹೇಳಿದ್ದಾನಲ್ಲವೆ?

ಪ್ರೊ|| ಎಂ.ವಿ.ಸೀ.ಯವರ ಟಿಪ್ಪಣಿಯಲ್ಲಿ ಮುಳಿಯ ತಿಮ್ಮಪ್ಪಯ್ಯನವರ 'ಸೂಕ್ಷ್ಮವಾದ ವಿವೇಚನೆ'ಯನ್ನು ಹೀಗೆ ಬರೆಯಲಾಗಿದೆ: "ಕಾರಕಂ ಎಂಬ ಪದವು ಸಂಸ್ಕೃತ ವ್ಯಾಕರಣಾನುಸಾರವಾದ ವ್ಯುತ್ಪತ್ತಿಯಂತೆ 'ಮಾಡಿಸುವ ವ್ಯಕ್ತಿ'ಯನ್ನು ಸೂಚಿಸುವುದಲ್ಲದೆ. 'ಮಾಡುವ ವ್ಯಕ್ತಿ'ಯನ್ನಲ್ಲ. (ಕಾರಯತೀತಿ ಕಾರಕಃ) 'ಕರೋತಿ ಇತಿ ಕರ್ತಾ' ಎಂದು 'ಕರ್ತೃ' ಪದವು ರೂಪಿತವಾಗಿದೆ. ಇಂಥ 'ಕರ್ತೃ' ಎಂಬ ಪದವು ಕಾರಕವೆನ್ನಿಸುವುದು ಹೇಗೆ? 'ನರಪತಿ ಬಂದಂ' ಎಂಬ ದೃಷ್ಟಾಂತವನ್ನು ನೋಡಿರಿ. ಅದಕ್ಕೆ ನರಪತಿಯು 'ಬರುವಿಕೆ' ಎಂಬ ಕಾರ್ಯವನ್ನು 'ಮಾಡಿದನು' ಎಂದಲ್ಲದೆ 'ಮಾಡಿಸಿದನು' ಎಂದರ್ಥವಲ್ಲ" (ಪು. ೧೭೧).

ಇದು ಅತ್ಯಂತ ನಿರಾಧಾರವೂ ಪ್ರಮಾಣ ವಿರುದ್ಧವೂ ಆದ ಹೇಳಿಕೆ. 'ಕಾರಯತೀತಿ ಕಾರಕಃ' ಎಂದು ಈ ಕಾರಕ ಶಬ್ದಕ್ಕೆ ಯಾವನು ಎಲ್ಲಿ ವ್ಯುತ್ಪತ್ತಿಯನ್ನು ತೋರಿಸಿದ್ದಾನೆ? 'ಕರೋತೀತಿ ಕಾರಕಂ' ಎಂಬುದೇ ಇದರ ವ್ಯುತ್ಪತ್ತಿ. ಕರ್ತೃ ಶಬ್ದಕ್ಕೂ ಕಾರಕ ಶಬ್ದಕ್ಕೂ ಅರ್ಥದಲ್ಲಿ ಯಾವ ಭೇದವೂ ಇಲ್ಲ. ಮಹಾಭಾಷ್ಯಕಾರನಾದ ಪತಂಜಲಿ 'ಕಾರಕೇ' ಎಂಬ ಪಾಣಿನಿ ಸೂತ್ರಕ್ಕೆ (೧-೪-೨೩) ಭಾಷ್ಯವನ್ನು ಬರೆಯುತ್ತ 'ಕರೋತೀತಿ ಕಾರಕಂ' ಎಂದು ಸ್ಪಷ್ಟವಾಗಿ ನಿರೂಪಿಸಿದ್ದಾನೆ. ವ್ಯಾಕರಣ ಶಾಸ್ತ್ರದಲ್ಲಿ ಪತಂಜಲಿಗಿಂತಲೂ ಹೆಚ್ಚಿನ ಪ್ರಾಮಾಣಿಕನು ಯಾರು?

ಅಂತೆಯೇ ಕೈಯಟನ ಪ್ರದೀಪ. ಶಬ್ದೇಂದುಶೇಖರ, ಪ್ರೌಢಮನೋರಮಾ, ತತ್ತ್ವಬೋಧಿನೀ—ಮುಂತಾದ ಸಕಲ ವ್ಯಾಕರಣ ಗ್ರಂಥಗಳಲ್ಲಿಯೂ ಈ ವ್ಯುತ್ಪತ್ತಿಯನ್ನು ಅಂಗೀಕರಿಸಲಾಗಿದೆ. ಮುಳಿಯ ತಿಮ್ಮಪ್ಪಯ್ಯನವರ ಹೇಳಿಕೆಯಂತೆ 'ಮಾಡಿಸುವವನು' ಕಾರಕನಾದಮೇಲೆ 'ನೃಪಂ ಸೈನಿಕರಂ ಬರಿಸಿದಂ', 'ನೃಪಂ ಸೈನಿಕರಿಂ ಯುದ್ಧಮಂ ಮಾಡಿಸಿದಂ' ಎಂಬ ವಾಕ್ಯಗಳಲ್ಲಿ ನೃಪನು ಕಾರಕನಾಗುವುದಕ್ಕೆ ಅಡ್ಡಿಯೇನು? ಇಲ್ಲಿ ಪ್ರಥಮೆಯೇ ಇದೆ. ಕರ್ತೃ ಕಾರಕವಾಗಲು ಬಾಧಕವೇನು?

'ಪಂಪನು ಕಾವ್ಯವನ್ನು ರಚಿಸಿದನು' ಎಂಬ ವಾಕ್ಯದಲ್ಲಿ ಪಂಪನು ಕ
ಕಾವ್ಯವು ಕರ್ಮಪದ ಎಂಬುದು ಎಲ್ಲರಿಗೂ ತಿಳಿದಿದೆ. ಇದನ್ನು ಕ
ಪ್ರಯೋಗಕ್ಕೆ ತಿರುಗಿಸಿದರೆ 'ಪಂಪನಿಂದ ಕಾವ್ಯವು ರಚಿತವಾಯಿತು' ಎಂದಾಗು
ಎರಡನೆಯ ವಾಕ್ಯದಲ್ಲಿ ಕಾರಕ ಯಾವುದು ? ಪಂಪನು ಕರ್ತೃವಾದ್ದರಿಂದ
ಮತದಂತೆ ಕಾರಕವಲ್ಲ. ಕಾವ್ಯವು ಪ್ರಥಮಾಂತವಾದ್ದರಿಂದ ನಿಮಗೆ ಕಾರಕ
ಕಾರಕವಿಲ್ಲದ ವಾಕ್ಯವೂ ಇರುವುದುಂಟೊ ? ಇನ್ನೂ ಪ್ರಶ್ನೆಗಳಿವೆ. ತೃತಿ
ವಿಭಕ್ತಿ ನಿಮಗೆ ಕಾರಕವಷ್ಟೆ ? ಎರಡನೆಯ ವಾಕ್ಯದಲ್ಲಿ 'ಪಂಪನಿಂದ'–
ಕಾರಕ ? ಮೊದಲನೆಯ ವಾಕ್ಯದಲ್ಲಿ ಕರ್ತೃವಾದ್ದರಿಂದ ಇಲ್ಲಿಯೂ ಕರ್ತೃವೆನ್ನಬ
ಇಲ್ಲಿ ತೃತೀಯೆ ಬಂದಿರುವುದರಿಂದ ಕರ್ತೃ ಕಾರಕವೆನ್ನಲಡ್ಡಿಯೇನು ? ಕರಣವ
ಕರ್ತೃತ್ವ ಹೋಗಿ ಕರಣತ್ವ ಬಂದದ್ದು ಹೇಗೆ ? ಎರಡನೆಯ ವಾಕ್ಯದಲ್ಲಿ 'ಕಾವ್ಯ
ಯಾವ ಕಾರಕ ? ಕರ್ಮವೆಂದರೆ ಪ್ರಥಮಾವಿಭಕ್ತಿ ಇರುವುದರಿಂದ ನಿಮಗೆ
ವಾಗದು ! ಕರ್ಮವಲ್ಲವೆಂದರೆ ಮೊದಲಿನ ಕರ್ಮತ್ವವನ್ನು ಕಳೆದುಕೊಂಡದ್ದು ಹೆ
ಪ್ರಥಮೆ ಇರುವುದರಿಂದ ಇದು ಕರ್ತೃ ಎನ್ನುತ್ತೀರೇನು ? ಯಥೇಚ್ಛ
ಆಡಿಸುವುದಕ್ಕೆ ಶಾಸ್ತ್ರವು ಕೀಲ್ಗೊಂಬೆಯಲ್ಲ.

ಕ್ರಿಯಾನ್ವಯಿತ್ವ ಅಥವಾ ಕ್ರಿಯಾನಿರ್ವರ್ತಕತ್ವ ಕಾರಕದ ಲಕ್ಷಣ.
ಕ್ರಿಯಾಜನಕ. ಧಾತ್ವರ್ಥದ ಪ್ರಧಾನಕ್ರಿಯೆ ಕರ್ತೃವಿನಲ್ಲಿರುತ್ತದೆ. ಆದ್ದ
ಕರ್ತೃವೇ ಪ್ರಧಾನ ಕಾರಕ. ಅದು ಕಾರಕಗಳ ರಾಜ ಎಂದರೂ ಸಲ್ಲುವ
ಕರ್ಮಾದಿಕಾರಕಗಳೆಲ್ಲ ಕರ್ತೃವಿಗೇ ಅಧೀನ. ಕರ್ತೃವಿಲ್ಲದೆ ವಾಕ್ಯವೇ ಇಲ್ಲ. '
ನಿದ್ರಿಸುತ್ತದೆ, ಕಪ್ಪೆ ಕುಪ್ಪಳಿಸುತ್ತದೆ'—ಇಲ್ಲಿ ಕರ್ತೃ ಹೊರತಾಗಿ ಬೇರೆ ಕಾರಕ
ಇಲ್ಲ. ಕಾರಕವಿಲ್ಲದ ವಾಕ್ಯವೂ ಇರುತ್ತದೆಯೊ ?

ಪ್ರಥಮೆಯೂ ಕಾರಕ ವಿಭಕ್ತಿಯೇ. ಸಾಕ್ಷಾತ್ ಕಾರಕ ವಿಭಕ್ತಿಯಲ್ಲದಿದ್ದ
ಪರ್ಯಾಯವಾಗಿ ಕಾರಕ ವಿಭಕ್ತಿಯಾಗುತ್ತದೆ. ಹೇಗೆಂದರೆ, ಕರ್ತರಿ ಪ್ರಯೋಗ
ಕರ್ತೃವೂ ಕರ್ಮಣಿ ಪ್ರಯೋಗದಲ್ಲಿ ಕರ್ಮವೂ ತಿಙ್ (ಆಖ್ಯಾತ) ಪ್ರತ್ಯ
ಅರ್ಥ. ಈ ಕರ್ತೃ ಕರ್ಮಗಳಿಗೂ ಪ್ರಥಮಾಂತಕ್ಕೂ ಅಭೇದಾನ್ವಯ. ಕ
ಕರ್ಮಗಳಿಂದ ಅಭಿನ್ನವಾದ್ದರಿಂದ ಪ್ರಥಮಾಂತವು ಕರ್ತೃವೂ ಕರ್ಮವೂ ಆಗುತ್ತ
'ನರಪತಿ ಬಂದಂ'—ಇಲ್ಲಿ ನರಪತಿ ಕರ್ತೃ. 'ನರಪತಿಯಿಂ ಆನೆ ಏರಲ್ಪಟ್ಟಿತು
ಇಲ್ಲಿ ಆನೆ ಕರ್ಮ. ಆದ್ದರಿಂದ ಪ್ರಥಮೆಯೂ ಕಾರಕವಿಭಕ್ತಿಯೆಂದು ಮಹಾಭಾಷ್ಯ
ವ್ಯವಹೃತವಾಗಿದೆ. ಹೆಚ್ಚಿನ ವಿವರಗಳಿಗೆ ಲಘುಮಂಜೂಷಾ, ಶಬ್ದೇಂದುಶೇಖ
ಕಾರಕ ಪ್ರಕರಣವನ್ನು ನೋಡಬಹುದು.

ಷಷ್ಠಿಯು ಕಾರಕ ವಿಭಕ್ತಿಯಲ್ಲವೆನ್ನುವುದು ಅರ್ಧಸತ್ಯ. ಷಷ್ಠಿಯ ಅ
ಸಂಬಂಧವಾದರೆ, ಕ್ರಿಯಾನ್ವಯವಿಲ್ಲವಾದ್ದರಿಂದ ಕಾರಕವಲ್ಲ. ಸಂಬಂಧವು ನ
ವಿಧ. ಸ್ವಾಮಿತ್ವ ಒಂದೇ ಅಲ್ಲ. 'ರಾಜನ ಸೇವಕ'—ಇಲ್ಲಿ ಸ್ವಾಮಿತ್ವವು ಸಂಬ

'ದಶರಥನ ಮಗ'—ಇಲ್ಲಿ ಜನ್ಯಜನಕಭಾವ ಸಂಬಂಧ. 'ಮರದ ಕೊಂಬೆ'—ಇಲ್ಲಿ ಅವಯವಾವಯವಿಭಾವ. 'ನದಿಯ ದಡ'—ಇಲ್ಲಿ ಸಾಮೀಪ್ಯವೇ ಸಂಬಂಧ. 'ಶಬ್ದದ ಅರ್ಥ' ಇಲ್ಲಿ ವಾಚ್ಯವಾಚಕ ಸಂಬಂಧ. (ಕೇಶಿರಾಜನ ೧೪೩ನೆಯ ಸೂತ್ರವನ್ನು ನೋಡಿ) 'ಏಕಶತಂ ಷಷ್ಠ್ಯರ್ಥಾಃ' ಎಂದಿದ್ದಾನೆ ಮಹಾಭಾಷ್ಯಕಾರ. ನೂರೊಂದು ಷಷ್ಠ್ಯರ್ಥಗಳಿವೆಯಂತೆ. ಮೇಲ್ಕಂಡ ಉದಾಹರಣೆಗಳಲ್ಲಿ ಷಷ್ಠಿಯು ಕಾರಕವಲ್ಲ.

ಕರ್ತೃತ್ವ, ಕರ್ಮತ್ವ—ಎಂಬೆರಡು ಅರ್ಥಗಳೂ ಷಷ್ಠಿಗೆ ಉಂಟು. ಕೃದಂತದ ಯೋಗವಿದ್ದಾಗ ಕರ್ತೃ ಕರ್ಮವಾಚಕಗಳಿಗೆ ಷಷ್ಠೀ ವಿಭಕ್ತಿ ಬರುತ್ತದೆ. 'ಕರ್ತೃ ಕರ್ಮಣೋಃ ಕೃತಿ' ಎಂದು ಪಾಣಿನಿ ಸೂತ್ರ. ಇದು ಕನ್ನಡದಲ್ಲಿಯೂ ಸಮಾನ.

**ಉದಾ.:**—1) **ದೇವದತ್ತನ ಘಟದ ಮಾಟ**
**ಇಲ್ಲಿ ದೇವದತ್ತ ಕರ್ತೃ, ಘಟ ಕರ್ಮ ಎಂಬುದು ಸ್ಪಷ್ಟ.**

2) **ದೇವದತ್ತನ ನಿದ್ರೆ**
**ಇಲ್ಲಿ ದೇವದತ್ತ ಕರ್ತೃ. (ಭಟ್ಟಾಕಳಂಕನ ೨೨೫ನೇ ಸೂತ್ರವನ್ನು ನೋಡಿ)**

3) **ಕಾಳಿದಾಸನ ಕೃತಿ.**
**ಕಾಳಿದಾಸ ಕರ್ತೃಕವಾದ ಕೃತಿಯೆಂದರ್ಥ.**

4) **ವಸ್ತ್ರದ ನಿರ್ಮಾಣ.**
**ವಸ್ತ್ರಕರ್ಮಕವಾದ ನಿರ್ಮಾಣಕ್ರಿಯೆಯೆಂದರ್ಥ.**

ಕರ್ತೃ, ಕರ್ಮಾದಿ ಸಂಜ್ಞೆಗಳು ಬರುವುದಕ್ಕೆ ಕ್ರಿಯಾಪದವೇ ಇರಬೇಕೆಂಬ ನಿಯಮವಿಲ್ಲ. ಕೃದಂತವಿದ್ದರೂ ಬರುತ್ತದೆ. ಉಭಯತ್ರ ಧಾತುವಿದೆಯಷ್ಟೆ. ಧಾತ್ವರ್ಥಕ್ರಿಯೆ ಇದ್ದರೆ ಸಾಕು ಕಾರಕವಾಗುವುದಕ್ಕೆ.

'ಅಧೀಶ್ವರನಾ ದಯೆ ಸಾಲ್ಗುಂ' ಎಂಬ ಉದಾಹರಣೆಯನ್ನು (ಪ. ೧೧೫) ಈಗ ಪರೀಕ್ಷಿಸಬಹುದು. ದಯಧಾತುವಿನಿಂದ ನಿಷ್ಪನ್ನವಾದ ಕೃದಂತ ಶಬ್ದ ದಯೆ. ವ್ಯಾಕರಣ ಪ್ರಕ್ರಿಯೆಯಂತೆ ಇದು ಕ್ರಿಯೆ. ಕರ್ತೃಭಾವದಿಂದ ಅಧೀಶ್ವರನಿಗೆ ದಯೆಯಲ್ಲಿ ಅನ್ವಯ ವಿವಕ್ಷಿತವಾದರೆ, ಅಧೀಶ್ವರ ಕರ್ತೃಕದಯೆ ಎಂದರ್ಥ. ಈ ಪಕ್ಷದಲ್ಲಿ ಷಷ್ಠಿ ಕಾರಕವಿಭಕ್ತಿ. ಅಧೀಶ್ವರನೇ ಕರ್ತೃ. ಹಾಗಲ್ಲದೆ ಸಂಬಂಧ ಸಾಮಾನ್ಯದಿಂದ ವಿವಕ್ಷಿತವಾದರೆ ಅಧೀಶ್ವರ ಸಂಬಂಧಿಯಾದ ದಯೆ ಎಂದಿಷ್ಟೇ ಅರ್ಥ. ಈ ಪಕ್ಷದಲ್ಲಿ ಷಷ್ಠಿ ಕಾರಕವಿಭಕ್ತಿಯಲ್ಲ. ಇದು ವಿವಕ್ಷಾಧೀನ. 'ವಿವಕ್ಷಾತಃ ಕಾರಕಾಣಿ ಭವಂತಿ'. ಇದು ವ್ಯಾಕರಣದಲ್ಲಿ ಸುಪ್ರಸಿದ್ಧವಾದ ವಿಷಯ.

ಆದರೆ ಅಧೀಶ್ವರನ ಮನೆ, ಮರದ ಹಣ್ಣು, ನನ್ನ ಮಡದಿ—ಮೊದಲಾದ ಸ್ಥಳದಲ್ಲಿ ಕ್ರಿಯಾಶಬ್ದವಿಲ್ಲದ್ದರಿಂದ ಷಷ್ಠಿಯು ಎಂದಿಗೂ ಕಾರಕ ವಿಭಕ್ತಿ ಎನ್ನಿಸುವುದಿಲ್ಲ. ನಾಗವರ್ಮನು ಭಾಷಾಭೂಷಣದಲ್ಲಿ ಸ್ವಾಮ್ಯರ್ಥವನ್ನು ಕಾರಕವೆಂದಿರುವುದು ಪ್ರಾಮಾದಿಕ.

ಇನ್ನೊಂದು ಪ್ರಶ್ನೆ. ನಿಮ್ಮ ಮತದಂತೆ ಷಷ್ಠೀಕಾರಕಕ್ಕೆ ಹೆಸರೇನು ? ಕರ್ಮ, ಕರಣ, ಸಂಪ್ರದಾನ, ಅಪಾದಾನ, ಅಧಿಕರಣ—ಇವುಗಳಂತೆ ಈ ಕಾರಕದ ನಾ ಯಾವುದು ?

ಅಲ್ಲಿಗೆ ಏಳು ವಿಭಕ್ತಿಗಳೂ ಕಾರಕ ವಿಭಕ್ತಿಗಳಾಗಬಹುದೆಂದು ಸಿದ್ಧವಾಯಿತ ದಾತ್ವರ್ಥಕ್ರಿಯೆಯಲ್ಲಿ ಕರ್ತ್ರಾದಿಭಾವದಿಂದ ಅನ್ವಯವಿದ್ದರೆ ಕಾರಕ, ಹಾಗಿಲ್ಲದಿದ್ದ ಕಾರಕವಲ್ಲ ಎಂದು ನಿಷ್ಕರ್ಷೆ. ಷಷ್ಠೀವಿಭಕ್ತಿಗೆ ವಿಶೇಷವೇನೂ ಇಲ್ಲ. ಇತ ವಿಭಕ್ತಿಗಳೂ ಕಾರಕ ವಿಭಕ್ತಿಗಳಾಗದೆ ಇರಬಹುದು—

೧. **ಪಂಪನನ್ನು ಹೊರತು ಉಳಿದವರಿಗೆ ಶಕ್ಯವಲ್ಲ.**

**'ಹೊರತು' ಶಬ್ದಯೋಗದಿಂದ ದ್ವಿತೀಯೆ ಬಂದಿದೆ. ಕರ್ಮವಿಲ್ಲವಾದ್ದರಿಂದ ಇದ ಕಾರಕವಿಭಕ್ತಿಯಲ್ಲ.**

೨. **ಅವನಿಗೆ ಒಳ್ಳೆಯ ಬುದ್ಧಿ ಇಲ್ಲ.**

**ಸಂಬಂಧಾರ್ಥದಲ್ಲಿ ಚತುರ್ಥೀ ; ಕಾರಕವಿಭಕ್ತಿಯಲ್ಲ.**

೩. **ಮನೆಯಿಂದ ಹೊರಗೆ ಇದ್ದಾನೆ.**

**'ಹೊರಗೆ' ಶಬ್ದದ ಯೋಗದಿಂದ ತೃತೀಯೆ ಅಥವಾ ಪಂಚಮಿ ; ಕಾರಕವಲ್ಲ.**

೪. **ಹುಡುಗನ ಪುಸ್ತಕ.**

**ಇಲ್ಲಿ ಷಷ್ಠೀವಿಭಕ್ತಿ ಕಾರಕವಲ್ಲ.**

ಇರಲಿ. ಕರ್ತೃವು ಕಾರಕವೆಂಬುದೂ ಪ್ರಥಮೆಯು ಕಾರಕವಿಭಕ್ತಿಯೆಂಬುದೂ ವ್ಯಾಕರಣ ಸಿದ್ಧಾಂತ. ಇದನ್ನು ಕವಿರಾಜಮಾರ್ಗಕಾರನೂ ಒಪ್ಪಿಕೊಂಡಿದ್ದಾನೆನ್ನು ವುದಕ್ಕೆ ಆಧಾರವನ್ನೂ ಕೊಡಬಹುದು. ಮುಂದೆ ೧೨೧ನೆಯ ಪದ್ಯದಲ್ಲಿ "ನರಪತಿಯುಂ ನೃಪಾಂಗನೆಯರುಂ ನೆರೆವಟ್ಟಿಯಿನಾಡಿ ಪೋದರ್, ಪರಿಜನಮುಂ ಮಹೋತ್ಸವದೊಳೊಂದಿದುದು' ಎಂಬಲ್ಲಿ ನರಪತಿ, ನೃಪಾಂಗನೆಯರ್, ಪರಿಜನ— ಇವು ಮೂರೂ ಕರ್ತೃಗಳೆಂಬುದು ಸ್ಪಷ್ಟ. ಇವುಗಳಿಗೆ 'ಕಾರಕಸಂಪದಮು ತಗುಳ್ಗುಗುಂ' ಎಂದು ಹೇಳುತ್ತಾನೆ. ಇವು ಕಾರಕಗಳಲ್ಲದಿದ್ದರೆ ಈ ಮಾತು ಹೇಗ ಸಂಗತವಾಗುತ್ತದೆ ?

'ಮಾಡಿಸುವವನು ಕಾರಕ, ಮಾಡುವವನು ಕಾರಕನಲ್ಲ' ಎಂದು ಹೇಳತಕ್ಕ ಮುಳಿಯ ತಿಮ್ಮಪ್ಪಯ್ಯನವರು 'ತಮ್ಮದೇ ಆದ ಜಾಣ್ಮೆಯಿಂದ' ಈ ರೀತಿ ಈ ಸಂದೇಹವನ್ನು ನಿವಾರಿಸಿದ್ದಾರಂತೆ—ಮೇಲ್ಕಂಡ ವಾಕ್ಯಗಳಲ್ಲಿ "ಸಮುಚ್ಚಯ ಪದಗಳ ಕೂಟದಿಂದ ಆಯಾ ಪದಗಳು ತಂತಮ್ಮ ಕರ್ತೃತ್ವವನ್ನುಳಿದು ಕಾರಕಗಳ ಆಗಿ ಪರಿಣಮಿಸುವುದು ನ್ಯಾಯವಿದೆ ಎಂದರೆ ಕ್ರಿಯೆಯನ್ನು ಒಂದೊಂದಾಗಿ ಮಾಡ ಲಾರದೆ ಎರಡೂ ಕೂಡಿ ಮಾಡಿಸುವ ಕಾರಕತ್ವವನ್ನೊಂದಿದುವು ಎನ್ನಬೇಕು" (ಪು. ೧೭೮).

ಸರಿಯೇ. ಏಕವಚನದಲ್ಲಿ ಕಾರಕವಲ್ಲದಿದ್ದರೂ ಬಹುವಚನದಲ್ಲಿ ಕಾರಕ ಎಂದಾಯಿತು! ಅಂತೂ 'ನರಪತಿ ಬಂದನ್' ಎಂಬಲ್ಲಿ ಏಕವಚನವಿರುವುದರಿಂದ ಅದು ಕಾರಕವಲ್ಲ ಎಂದು ತೀರ್ಮಾನ! ಆಡುವ ಕ್ರಿಯೆಯಲ್ಲೇನೋ ನೃಪತಿಯೂ ನೃಪಾಂಗನೆಯರೂ ಸಹಕರಿಸಿ 'ಮಾಡಿಸುವ' ಕ್ರಿಯೆ ನಡೆಯಿತೆಂದೇ ತಿಳಿಯೋಣ. ವಾಕ್ಯರಚನೆ ಹೀಗಿದ್ದರೆ—ನೃಪತಿಯುಂ ನೃಪಾಂಗನೆಯರುಂ ತಂತಮ್ಮ ಮನೆಗಳೊಳ್ ಬಟ್ಟೆಯುಟ್ಟರ್, ಉಂಡರ್, ಮಲಂಗಿದರ್–ಎಂದು? ಈ ಕ್ರಿಯೆಗಳೂ ಅನ್ಯೋನ್ಯ ಸಹಕಾರದಿಂದ ನಡೆದು 'ಮಾಡಿಸಿದವು' ಆಗುತ್ತವೆಯೆಂದು ತಿಳಿಯೋಣವೆ?

ಇಷ್ಟೆಲ್ಲ ತಿರುವುಮುರುವಾಗಿ ವ್ಯಾಖ್ಯಾನ ಮಾಡುವುದಕ್ಕೆ ಕವಿರಾಜಮಾರ್ಗದ ಪದ್ಯಗಳಲ್ಲಿರುವ ವಿರೋಧವಾದರೂ ಏನು? ನಾವು ಹಿಂದೆ ಹೇಳಿದ ಕ್ರಮದಿಂದಲೂ ಸಂಸ್ಕೃತವ್ಯಾಕರಣಕ್ರಮದಿಂದಲೂ ಕರ್ಮವೇ ಮೊದಲನೆಯ ಕಾರಕವಾದ್ದರಿಂದ 'ಕಾರಕಾಮಾಳಿ ಕರ್ಮಕರಣಾದಿಕದಿಂ' ಎಂದು ಗ್ರಂಥಕಾರನು ಹೇಳಿದ್ದಾನೆ. ವಿಭಕ್ತಿ ಕ್ರಮದಲ್ಲಿ ಪ್ರಥಮಾವಿಭಕ್ತಿಯೇ ಮೊದಲಿನದಾದ್ದರಿಂದ 'ಪ್ರಥಮಾದಿ ಭೇದ ನಿರ್ಧಾರಣದಿಂದ' ಎಂದು ಹೇಳಿ ಅಂತೆಯೇ ಉದಾಹರಿಸಿದ್ದಾನೆ. ಇಲ್ಲಿ ವಿರೋಧವೇನಿದೆ? ಯಾವ ಕಾರಕಕ್ಕೆ ಯಾವ ವಿಭಕ್ತಿಯೆಂಬುದನ್ನು ವ್ಯಾಕರಣದಿಂದ ನಿರ್ಣಯಿಸಿಕೊಳ್ಳಬೇಕು. ಅದನ್ನೆಲ್ಲ ವಿವರಿಸಲು ಇದೇನು ವ್ಯಾಕರಣಶಾಸ್ತ್ರವೆ? ಹಾಗೆ ನೋಡಿದರೆ ಕಾರಕಗಳಲ್ಲದಿದ್ದರೂ ದ್ವಿತೀಯಾದಿ ವಿಭಕ್ತಿಗಳು ಬರುತ್ತವೆಯೆಂದು ನಾವು ತೋರಿಸಿದ್ದೇವೆ. ಇದನ್ನು ಗ್ರಂಥಕಾರನು ಹೇಳದಿದ್ದರಿಂದ ನ್ಯೂನತೆಯಾಗಲಿಕ್ಕಿಲ್ಲವೆ? ಈ ವಿಷಯದಲ್ಲಿ ಗ್ರಂಥಕಾರನ ಇಚ್ಛೆಯೇ ನಿಯಾಮಕ. ಷಷ್ಠಿಯೂ ಕಾರಕವಿಭಕ್ತಿಯಾಗಬಹುದೆಂದು ತೋರಿಸಿದ್ದೇವೆ. ಅರ್ಥಾಲಂಕಾರಗಳಲ್ಲಿ ಉಪಮೆಯೇ ಸರ್ವಮೂಲವೂ ಪ್ರಧಾನವೂ ಆದ ಅಲಂಕಾರ. ರೂಪಕವು ಉಪಮಾಜನ್ಯವಾದದ್ದು. ಈ ಗ್ರಂಥಕಾರನು ರೂಪಕವನ್ನು ಹೇಳಿದಮೇಲೆ ಎಲ್ಲಿಯೋ ಒಂದು ಕಡೆ ಉಪಮೆಯನ್ನು ವಿವರಿಸಿದ್ದಾನೆ. ಇಲ್ಲಿ ವಿರೋಧ ಕಾಣದೆ? 'ನಿದರ್ಶನಾ'ಲಂಕಾರ ಎಂದು ಪ್ರಾರಂಭಿಸಿ 'ದೃಷ್ಟಾಂತ' ಎಂದು ಮುಗಿಸಿದ್ದಾನೆ. ಇದು ವಿರುದ್ಧವಲ್ಲವೆ? 'ಸಮಾಹಿತ'ವನ್ನು ಗುಣವೆಂದೂ ಅಲಂಕಾರವೆಂದೂ ವಿರುದ್ಧವಾಗಿ ಹೇಳುತ್ತಾನೆ. (ಪು. 69).

ವಸ್ತುಸ್ಥಿತಿಯೇನೆಂದರೆ, ಕನ್ನಡದ ಅಲಂಕಾರ ವ್ಯಾಕರಣ ಲಕ್ಷಣಗ್ರಂಥಗಳೆಲ್ಲವೂ (ಭಟ್ಟಾಕಳಂಕನ ಶಬ್ದಾನುಶಾಸನವೊಂದನ್ನು ಹೊರತಾಗಿಸಿ) ಸಾಮಾನ್ಯರೂಪದಲ್ಲಿ ಬರೆದವು. ಈ ಲಾಕ್ಷಣಿಕರು ಹೇಳುವ ಲಕ್ಷಣಗಳು ಕೇವಲ ಪರಿಚಯಾತ್ಮಕವಾದವು. ಅವ್ಯಾಪ್ತಿ, ಅತಿವ್ಯಾಪ್ತಿ ದೋಷಗಳಿಂದ ಇವು ಮುಕ್ತವಾಗಿಲ್ಲ. ಏಕೆಂದರೆ, ಸಾಮಾನ್ಯ ಜ್ಞಾನವನ್ನು–ಪರಿಚಯವನ್ನು ಮಾಡಿಕೊಡುವುದು ಮಾತ್ರ ಇವರ ಉದ್ದೇಶವಾಗಿತ್ತು. ಇವುಗಳಲ್ಲಿ ಅತಿಯಾದ ತರ್ಕವನ್ನು ಬಳಸಬಾರದು. ವಿದ್ವಾಂಸರು ಬರಿಯ ಊಹೆಯಿಂದ ಪರಮ ಸಿದ್ಧಾಂತವನ್ನೇ ಅಲ್ಲಗಳೆಯುವುದು ಸರಿಯಲ್ಲ.

## ಜಾತ್ಯೇಕ ವಚನ ವಿಚಾರ

೬. ಜಾತಿವಿಭಾಗಮಂ ಬಗೆದು ಪೇೞೆ ಬಹುತ್ವಮನೇಕವಾಕ್ಯ-ಸಂ-
ಜಾತ-ಗುಣಂ ತದೇಕವಚನಂಗಳೊಳಂ ದೊರೆವೆತ್ತು ಕೂಡುಗುಂ ।
ಮಾತಿನೊಳೇನೊ ಸಂಖ್ಯೆಗಳೊಳೇಕ-ಬಹುತ್ವ-ವಿಪರ್ಯಯಕ್ಕಸಂ-
ಖ್ಯಾತಗುಣಂ ವಿಕಲ್ಪಮದು ಕನ್ನಡದೊಳ್ ಗುಣಮಂ ತಗುಳ್ಚುಗುಂ ॥

(ಪ. ೧೯-ಪು. 32)

ಜಾತ್ಯೇಕವಚನ ಇಲ್ಲಿ ಪ್ರಸ್ತುತ. ಡಾ॥ ಕೆ. ಕೃ. ಅವರ ಅರ್ಥವಿವರ ಹೀಗಿದೆ: "[ಕರ್ತೃವಾದ ನಾಮಪದ] 'ಜಾತಿ' ಅಥವಾ ಸಾಮಾನ್ಯವೆಂದು (ವಿವ ಸದೆ) ಅದರ ಪ್ರತ್ಯೇಕ ವ್ಯಕ್ತಿಯನ್ನು ಕುರಿತಿದ್ದರೆ ಅನೇಕ ಅಥವಾ ಬಹುವಚನ ವಾಕ್ಯಕ್ರಿಯೆ ಗುಣವೇ ಆಗುವುದು; ಹಾಗಲ್ಲದೆ ಜಾತಿವಾಚಕವಾಗಿ (ಸಾಮಾನ ವಿವಕ್ಷೆ) ಇರುವಾಗ ಏಕವಚನ ಪ್ರಯೋಗವೂ ಸರಿಯೇ ಎನಿಸುವುದು. ಸಂಖ್ಯೆಗ ಸಂಬಂಧವೊದಗಿದಾಗ ಜಾತಿವಾಚಕ ಪದಕ್ಕೆ ಏಕವಚನ ಬಹುವಚನಗಳ ವ್ಯತ್ಯಯ ಕೂಡ ವೈಕಲ್ಪಿಕವಾಗಿ ಅನಿರ್ದಿಷ್ಟವಿರುತ್ತದೆ. ಕನ್ನಡದಲ್ಲಿ ಅಂತಹ ವ್ಯತ್ಯಯವು ಗುಣವನ್ನೇ ಉಂಟುಮಾಡುತ್ತದೆ."

ಈ ಅರ್ಥವಿವರಣೆ ಸರಿಯಾದೀತೆ ?

೧. ಶಬ್ದದ ಅರ್ಥ ವ್ಯಕ್ತಿಯಾದಾಗ ಬಹುವಚನದಲ್ಲಿ ಬಹುತ್ವ ಬರುವುದ ಸಹಜವೇ. ಇಲ್ಲಿ ಹೇಳಬೇಕಾದ್ದಿಲ್ಲ. 'ಜಾತಿವಿಭಾಗಮಂ ಬಗೆದು ಪೇೞೆ' ಎಂದಿರು ವಾಗ ವ್ಯಕ್ತಿಪಕ್ಷದ ವಿವರಣೆಗೆ ಉತ್ಥಿತಿ ಎಲ್ಲಿ ?

೨. 'ಬಹುವಚನದ ವಾಕ್ಯಕ್ರಿಯೆ' ಎಂಬ ಪದಪುಂಜದ ಅರ್ಥ ನಮಗಾಗಲಿಲ್ಲ

೩. ಶಬ್ದದ ಅರ್ಥ ಜಾತಿಯಾದಾಗ ಏಕವಚನ ಬರುವುದು ಸಹಜವೇ. ಅದನ್ನೂ ಹೇಳಬೇಕಾದ್ದಿಲ್ಲ.

ಪ್ರೊ॥ ಎಂ.ವಿ.ಸೀ.ಯವರೂ ಇದರ ಅರ್ಥವನ್ನು ಸರಿಯಾಗಿ ಗ್ರಹಿಸಿದಂತೆ ಕಾಣುವುದಿಲ್ಲ (ಪು. ೧೭೪-೧೭೫).

ಮೊದಲು ತಿಳಿದಿರಬೇಕಾದದ್ದು ಇಷ್ಟು: ಶಬ್ದಕ್ಕೆ ಜಾತಿ ಮತ್ತು ವ್ಯಕ್ತಿ (ದ್ರವ್ಯ) ಎರಡರಲ್ಲೂ ಶಕ್ತಿಯಿದೆ. ಜಾತಿಯೆಂದರೆ ಅನೇಕ ವ್ಯಕ್ತಿಗಳಲ್ಲಿರುವ ಸಾಮಾನ್ಯ ಧರ್ಮ. ಇದನ್ನು ಸಾಮಾನ್ಯವೆಂದೂ ಕರೆಯುತ್ತಾರೆ. ವ್ಯಕ್ತಿಗಳು ಅನೇಕವಾದರೂ ಜಾತಿ ಒಂದೇ. ಮನುಷ್ಯರಲ್ಲಿ ಮನುಷ್ಯತ್ವ, ಕುದುರೆಗಳಲ್ಲಿ ಅಶ್ವತ್ವ, ಆನೆಗಳಲ್ಲಿ ಗಜತ್ವ, ಘಟಗಳಲ್ಲಿ ಘಟತ್ವ ಜಾತಿಯೆನಿಸುತ್ತದೆ. ಸಾಮಾನ್ಯವಾಗಿ ಶಬ್ದವು ವ್ಯಕ್ತಿಯನ್ನು ಬೋಧಿಸುತ್ತದೆ. ಕೆಲವೆಡೆ ಜಾತಿಯನ್ನು ಬೋಧಿಸುತ್ತದೆ. 'ಭಾವಪ್ರಧಾನೋ ನಿರ್ದೇಶಃ' ಎಂಬ ಘೋಷಣೆಯ ಅರ್ಥ ಇದೇ. ಈ ಪಕ್ಷದಲ್ಲಿ ಅಶ್ವ ಎಂದರೆ ಅಶ್ವತ್ವ ಎಂದರ್ಥ. 'ಅಶ್ವ ಓಡಿತು' ಎಂದಾಗ ಅಶ್ವತ್ವ ಓಡುವುದಿಲ್ಲ ವಾದ್ದರಿಂದ ವ್ಯಕ್ತಿದ್ವಾರಾ ಕ್ರಿಯೆಯಲ್ಲಿ ಅನ್ವಯ ಎಂದು ಈ ಪಕ್ಷದ ಸಿದ್ಧಾಂತ.

ಪ್ರತಿನಿತ್ಯದ ವ್ಯವಹಾರದಲ್ಲಿ ಜಾತಿಪಕ್ಷವನ್ನಾಶ್ರಯಿಸಿ ಮಾತನಾಡುತ್ತೇವೆ, ಗಮನಿಸಿಲ್ಲ. 'ಮನುಷ್ಯನು ತಪ್ಪು ಮಾಡುವುದು ಸಹಜ'—ಈ ವಾಕ್ಯವನ್ನು ಗಮನಿಸಬೇಕು. ಸಕಲ ಮನುಷ್ಯರೂ ತಪ್ಪು ಮಾಡುತ್ತಾರೆ—ಎಂಬುದು ವಿವಕ್ಷಿತಾರ್ಥ. ಆದರೆ 'ಮನುಷ್ಯನು' ಎಂದು ಏಕವಚನವಿದೆಯಲ್ಲ ? ಆದ್ದರಿಂದ ಇಲ್ಲಿ ಮನುಷ್ಯಶಬ್ದಕ್ಕೆ 'ಮನುಷ್ಯತ್ವ' ಎಂದರ್ಥ. 'ಎಲ್ಲೆಲ್ಲಿ ಮನುಷ್ಯತ್ವ ಇದೆಯೋ ಅಲ್ಲೆಲ್ಲ ತಪ್ಪು ಮಾಡುವುದಿದೆ' ಎಂದು ತಾತ್ಪರ್ಯವಾಗುತ್ತದೆ. 'ಕುದುರೆಗೆ ಬಾಲವಿದೆ, ಆನೆಗೆ ಸೊಂಡಿಲಿದೆ' ಮೊದಲಾದದ್ದೆಲ್ಲ ಜಾತಿಪಕ್ಷವನ್ನವಲಂಬಿಸಿದ ಪ್ರಯೋಗ. ಜಾತಿಯು ಒಂದೇ ಆದ್ದರಿಂದ ಏಕವಚನವೇ ಬರಬೇಕು. ಹಾಗಾದರೆ 'ಮನುಷ್ಯರು ತಪ್ಪು ಮಾಡುತ್ತಾರೆ, ಕುದುರೆಗಳಿಗೆ ಬಾಲವಿದೆ' ಮುಂತಾದ ಪ್ರಯೋಗವಿದೆಯಲ್ಲ, ಇಲ್ಲಿ ಬಹುವಚನ ಹೇಗೆ ? ಎಂಬುದು ಈಗ ಬಂದಿರುವ ಪ್ರಶ್ನೆ. 'ಜಾತ್ಯಾಖ್ಯಾಯಾಮೇಕಸ್ಮಿನ್ ಬಹುವಚನಮನ್ಯತರಸ್ಯಾಂ' ಎಂಬ ಪಾಣಿನಿಸೂತ್ರ (೧-೨-೫೮) ಹೊರಟಿರುವುದು ಇದಕ್ಕಾಗಿ. ವ್ಯಕ್ತಿಪಕ್ಷದಲ್ಲಿ ಈ ಪ್ರಶ್ನೆಯೇ ಇಲ್ಲ. ಬಹುತ್ವ ವಿವಕ್ಷಿತವಾದರೆ ಬಹುವಚನ ಬಂದೇಬರುತ್ತದೆ. ಜಾತಿಯು ಒಂದೇ ಆದ್ದರಿಂದ ಬಹುವಚನ ಸಾಧುವೆ? —ಎಂಬುದಕ್ಕೆ ಉತ್ತರವಾಗಿ ಮಾರ್ಗಕಾರನ ಲಕ್ಷಣ ಹೊರಟಿದೆ.

**ಪದ್ಯದ ಅರ್ಥವಿವರಣೆ**

"ಜಾತಿಯು ವಾಚ್ಯವೆಂಬ ಅಭಿಪ್ರಾಯದಿಂದ ಶಬ್ದವನ್ನು ಹೇಳಿದಾಗ ಬಹುವಚನ ಬರಬಹುದು. ಹೇಗೆಂದರೆ, ಇದು ಪ್ರಾಚೀನರ ಹಲವಾರು ವಾಕ್ಯಪ್ರಯೋಗಗಳಿಂದ ಗುಣವೆಂದು ಸಿದ್ಧವಾಗಿದೆ. (ಶಿಷ್ಟರ ಪ್ರಯೋಗವನ್ನನುಸರಿಸಿ ವ್ಯಾಕರಣ ನಿಯಮ.) ಈ ಬಹುವಚನವು ಜಾತ್ಯೇಕವಚನಕ್ಕೆ ಸರಿಸಮವಾಗಿ ಕೂಡಿಕೊಳ್ಳುತ್ತದೆ. (ಬಹುವಚನಕ್ಕೆ ಏಕವಚನದ ಅರ್ಥವೇ.) ಇದು ಏಕ, ಇದು ಅನೇಕ—ಎಂದು ಸಂಖ್ಯಾವಿಷಯವಾಗಿ ಇಲ್ಲಿ ಆಕ್ಷೇಪದ ಮಾತನ್ನೆತ್ತುವುದು ಬೇಡ. ಏಕತ್ವ ಬಹುತ್ವಗಳ ವೈಪರೀತ್ಯವೂ ಇಲ್ಲಿ ಬರುತ್ತದೆ. (ಕರ್ತೃವು ಏಕವಚನದಲ್ಲಿದ್ದರೆ ಕ್ರಿಯಾಪದವು ಬಹುವಚನದಲ್ಲಿಯೂ ಇರುತ್ತದೆ.) ಇದು ಹೆಚ್ಚಿನ ಗುಣವೇ ಹೊರತು ದೋಷವಲ್ಲ. ಜಾತಿವಾಚಕದ ಮೇಲೆ ಬಹುವಚನ ಬರುವುದು ವಿಕಲ್ಪವಾಗಿ. ಈ ವೈಪರೀತ್ಯವು ಕನ್ನಡದಲ್ಲಿ ಗುಣವನ್ನೇ ಉಂಟುಮಾಡುತ್ತದೆ."

ಉದಾ. ೧. ಕುದುರೆ ಆ ದಿಕ್ಕಿನ ಬಿಲ್ಲಾಳ್ಗಳನ್ನು ತಾಗಿದುವು.

(ಮುಂದಿನ ಪದ್ಯದಲ್ಲಿ ವೈಪರೀತ್ಯಕ್ಕೆ ಮಾತ್ರ ಈ ಉದಾಹರಣೆಯನ್ನು ಕೊಟ್ಟಿದ್ದಾನೆ. ಇನ್ನೆರಡನ್ನು ನಾವು ಊಹಿಸಿಕೊಳ್ಳಬೇಕು.)

೨. ಕುದುರೆ ತಾಗಿತು.

೩. ಕುದುರೆಗಳು ತಾಗಿದುವು.

ಮುಂದಿನ ಉದಾಹರಣಪದ್ಯದ ಉತ್ತರಾರ್ಧ ಹೀಗಿದೆ—

**ಕುದಿಕುದಿದತ್ತಣಿಂ ಕುದುರೆನೂಱುಜಿಗೊಳಾ ಬಲದಾನೆ ಪತ್ತು ತಾ-**
**ಗಿದುವೆನೆ ದೋಷಮಾ ಪಿರಿದು ಸಂಖ್ಯೆಯೊಳೇಕಬಹುತ್ವಸಂಗದಿಂ ॥ (ಪ. ೧೨೦)**

ಪೂರ್ವಾರ್ಧದಲ್ಲಿ ಹೇಳಿದ್ದು ಜಾತ್ಯೇಕ ವಚನದ ಗುಣ ಮತ್ತು ಉದಾಹರಣ ಈಗ ಹೇಳುತ್ತಿರುವುದು ಅದರಲ್ಲಿಯ ಒಂದು ದೋಷ. ಪದ್ಯದ ಅರ್ಥ ಸ್ಪ ವಾಗಿದೆ. ಇದನ್ನು ವಿವರಿಸುತ್ತ ಡಾ॥ ಕೆ. ಕೃ. ಅವರು "ಕುದುರೆನೂರರಲ್ಲಿ ಸೈನ್ಯ ಪತ್ತು ಆನೆ ತಾಗಿದುವು ಎಂದರೆ ಗುಣವಲ್ಲ, ದೋಷವೇ. ಏಕೆಂದರೆ, ಒಂದ ಬಹುತ್ವವಾಚಕವಾದ ಸಂಖ್ಯೆಯಲ್ಲಿ ಏಕವಚನ–ಬಹುವಚನಗಳೆರಡೂ ಸೇರಿಕೊಂಡ ಬಂದಿವೆ" ಎಂದು ಬರೆದು 'ಪತ್ತು ಆನೆ' ಎಂದು ಮಾಡಿಕೊಂಡ ಮೇಲೆ 'ತಾಗಿತು ಎಂಬ ಏಕವಚನ ಕ್ರಿಯೆಯೇ ಅಗತ್ಯ" ಎಂದು ಹೇಳಿದ್ದಾರೆ (ಪು. 32).

ಪ್ರೊ॥ ಎಂ.ವಿ.ಸೀ.ಯವರ ಅಭಿಪ್ರಾಯವೂ ಹೀಗೆಯೇ ಇದೆ. ಆದ "ಮೇಲ್ಕಂಡ ಗುಣವನ್ನು ವಿಕಲ್ಪವಾಗಿ ಹೊಂದಬಹುದೇ ಹೊರತು ಸಾಮಾನ್ಯವಾ ದೋಷವೆ ಎನಿಸುವುದು" ಎಂದು ಬರೆದಿದ್ದಾರೆ (ಪು. ೧೭೫). ಗುಣದೋಷಗಳ 'ವಿಕಲ್ಪ' ಎಂಬುದಾಗಲಿ, 'ಸಾಮಾನ್ಯವಾಗಿ ದೋಷ' ಎಂಬುದಾಗಲಿ ಇರಲಾರದು ಗುಣವಾದರೆ ಗುಣ, ಇಲ್ಲವಾದರೆ ದೋಷ. ಇವುಗಳಿಗೆ 'ವಿಕಲ್ಪ' ಎಂದರೇನು 'ಸಾಮಾನ್ಯವಾಗಿ ದೋಷ' ಎಂದು ಯಾವ ಲಾಕ್ಷಣಿಕನೂ ಹೇಳುವುದಿಲ್ಲ.

ಈರ್ವರು ವಿದ್ವಜ್ಜನರ ವಿವರಣೆಯೂ ಸರಿಯಾಗದು. 'ಆನೆ ತಾಗಿದುವು ಎಂಬುದು ಗುಣವಾದರೆ, 'ಪತ್ತು ಆನೆ ತಾಗಿದುವು' ಎಂಬುದೇಕೆ ಗುಣವಲ್ಲ 'ಪತ್ತು' ಎಂದು ವಿಶೇಷಿಸಿದ್ದರಿಂದ ಆದ ಬಾಧಕವೇನು ? 'ಏಕಬಹುತ್ವಸಂಗ' 'ಆ ತಾಗಿದುವು' ಎಂಬಲ್ಲಿಯೂ ಇದೆ. ಮತ್ತು ಈರ್ವರೂ 'ಕುದುರೆ ನೂಱುಜಿಗೊಳ್ ಎಂಬದನ್ನು ಲಕ್ಷ್ಯಕ್ಕೆ ತಂದುಕೊಂಡಿಲ್ಲ. ಇದೂ ಉದಾಹರಣೆಯಾಗದಿದ್ದಲ್ಲಿ 'ಆ ಪತ್ತು' ಎಂದಂತೆ 'ಕುದುರೆನೂಱು' ಎನ್ನುವುದಕ್ಕೆ ನಿಮಿತ್ತವಿಲ್ಲದೆ ಹೋಗುತ್ತದೆ 'ಪ್ರಬಲ ಸೈನ್ಯದೊಳ್' ಎಂದರೂ ನಡೆಯುತ್ತಿತ್ತು.

ಅಶ್ವತ್ವಾದಿ ಜಾತಿಯು ಒಂದೇ ಆದ್ದರಿಂದ ಅದು ವಿವಕ್ಷಿತವಾದಾಗ ಏಕವಚನ ಸಹಜವೇ ಎಂದು ಹಿಂದೆ ನಿರೂಪಿಸಿದ್ದಾಗಿದೆ. ಈ ವಿವಕ್ಷೆ ವಕ್ತೃವಿನ ಅಧೀನ ಆದರೂ ಪತ್ತು, ನೂರು ಮೊದಲಾದ ಬಹುತ್ವದ ಸಂಖ್ಯಾವಾಚಿ ವಿಶೇಷಣವಾ ದ್ದಾಗ ಜಾತಿಯ ವಿವಕ್ಷೆಯೇ ಕೂಡದು. ಆಗ ವ್ಯಕ್ತಿಪರವಾದ ವಿವಕ್ಷೆಯೇ ಇರಬೇಕು ಏಕೆಂದರೆ, ಜಾತಿಯಲ್ಲಿ ಬಹುತ್ವ ಸಂಖ್ಯೆ ಬಾಧಿತವಾಗುತ್ತದೆ. ಪಿರಿದು ಸಂಖ್ಯೆಯ ವಿಷಯದಲ್ಲಿ ಏಕತ್ವ–ಬಹುತ್ವಸಂಗವೆಂಬ ವಿರೋಧವಿರುವುದರಿಂದ 'ಪತ್ತು ಆನೆ ಎಂಬ ಪ್ರಯೋಗ ತಪ್ಪು. 'ಪತ್ತು ಆನೆಗಳ್' ಎಂದಿರಬೇಕು. ಹಾಗೆಯೆ 'ಕುದುರೆನೂಱುಜಿಗೊಳ್' ಎಂಬುದು ತಪ್ಪು. 'ಕುದುರೆಗಳ್ ನೂಱುಜಿಗೊಳ್ ಎಂದಿರಬೇಕು—ಎಂಬ ಅರ್ಥವಿವರಣೆ ಸಮಂಜಸವೆಂದು ನಮ್ಮ ಅಭಿಪ್ರಾಯ

'ಹುಡುಗರೈವರೊಳ್' ಎನ್ನಬಹುದು. 'ಹುಡುಗನೈವರೊಳ್' ಎನ್ನಬಹುದೊ ? 'ಹತ್ತು ರಾಜನು, ನೂರು ಮನುಷ್ಯನು' ಎಂಬುದು ಸಾಧುಪ್ರಯೋಗವೆಂದು ಯಾರೂ ಹೇಳಲಾರರು.

ಆದರೆ ಕೇಶಿರಾಜನು 'ಪತ್ತು ದೆಸೆ–ಪತ್ತು ದೆಸೆಗಳ್, ನಾಲ್ಕು ಯುಗಂ–ನಾಲ್ಕು ಯುಗಂಗಳ್' ಎಂದೂ (ಸೂ. ೧೫೦) ಭಟ್ಟಾಕಳಂಕನು 'ಈರೇಟು ಲೋಕಂಗಳ್–ಈರೇಟು ಲೋಕಂ' (ಸೂ. ೩೨೬) ಎಂದೂ ಉದಾಹರಿಸಿ, ಇಲ್ಲಿ ಏಕವಚನವನ್ನೂ ವಿಕಲ್ಪವಾಗಿ ಅಂಗೀಕರಿಸಿದ್ದಾರೆ. ಇದೂ ಸಹ ನಪುಂಸಕ ಲಿಂಗದ ಶಬ್ದಗಳಿಗೆ ಮಾತ್ರ ಸೀಮಿತವೆಂದು ತೋರುತ್ತದೆ. ಇಲ್ಲದಿದ್ದರೆ 'ನೂರು ಮನುಷ್ಯನು' 'ಮೂವರು ಭಾರ್ಯೆ'–ಈ ಪ್ರಯೋಗವೂ ಸಾಧುವೆಂದು ಒಪ್ಪಬೇಕಾದೀತು.

ಕವಿರಾಜಮಾರ್ಗಕಾರನ ತರುವಾಯ ಸಂಖ್ಯಾವಾಚಿ ಇದ್ದಾಗಲೂ ಜಾತ್ಯೇಕ ವಚನವನ್ನು ಕವಿಗಳು ಬಳಸಿರಬೇಕು. ಇದನ್ನು ಅನುಲಕ್ಷಿಸಿ ಮುಂದಿನ ವೈಯಾಕರಣರು ಸ್ವಲ್ಪ ಮಾರ್ಪಾಟನ್ನು ಮಾಡಿರಬಹುದು. ಮಾರ್ಗಕಾರನಿಗೂ ಕೇಶಿರಾಜನಿಗೂ ನಾನೂರು ವರ್ಷಗಳ ಅಂತರವಿದೆ. ಪ್ರಯೋಗದ ಸ್ವಲ್ಪ ಬದಲಾವಣೆಗೆ ಇಷ್ಟು ಸಮಯ ಸಾಕು. ಇದನ್ನು ವಿದ್ವಾಂಸರು ತೀರ್ಮಾನಿಸಬೇಕು. ವಾಸ್ತವದಲ್ಲಿ ಪತ್ತು ದೆಸೆ, ನಾಲ್ಕುಯುಗಂ–ಎಂಬುದು ಸಮಾಹಾರ ದ್ವಿಗುವೆಂದು ಅಂಗೀಕರಿಸುವುದು ಯುಕ್ತ. ಸಂಸ್ಕೃತದಲ್ಲಿಯೂ ಸಮಾಹಾರ ದ್ವಿಗುವಾದರೆ 'ದಶದಿಶಂ' 'ಚತುರ್ಯುಗಂ' ಎಂದು ಏಕವಚನ ಬರುತ್ತದೆ.

## ಸಮುಚ್ಚಯ

೭. **ಬೆರಸಿರೆ ಮುಂ ಸಮುಚ್ಚಯ ಪದ ದ್ವಿತಯೋಕ್ತಿ......॥ (ಪ. ೧೨೧–ಪು. 33)**

ಒಂದೇ ವಾಕ್ಯದಲ್ಲಿ ಎರಡು (ಅಥವಾ ಅಧಿಕ) ಕಾರಕಗಳು (ಕರ್ತೃ ಮತ್ತು ಕರ್ಮ) ಸಮುಚ್ಚಿತವಾಗಿದ್ದರೆ, ಅವುಗಳಿಗೆ ಅನ್ವಯಿಸುವ ಕ್ರಿಯಾಪದವು ಬಹುವಚನ ದಲ್ಲಿರಬೇಕೆಂದು ಈ ನಿಯಮದ ತಾತ್ಪರ್ಯ. ಕಾರಕ ಸಂಪದ=ಕಾರಕಗಳ ಬಾಹುಲ್ಯ; ಬಹುವಚನವೆಂದರ್ಥ.

ಉದಾ :—ನರಪತಿಯುಂ ನೃಪಾಂಗನೆಯುರುಂ ನೆರೆದಟ್ಟಿಯಿನಾಡಿ ಪೋದರ್.

ಇಲ್ಲಿ '...ನೃಪಾಂಗನೆಯುಂ' ಎಂದು ಏಕವಚನವಿದ್ದರೂ ಕ್ರಿಯಾಪದವು 'ಆಡಿಪೋದರ್' ಎಂದು ಬಹುವಚನದಲ್ಲೇ ಇರಬೇಕಾಗುತ್ತದೆ.

ಕಾರಕವೆಂದರೆ ಕರ್ತೃವೇ ಅಲ್ಲ, ಕರ್ಮವೂ ಆಗಬಹುದು.

ಉದಾ :—ರಾಜನಿಂ ಮಂತ್ರಿಯುಂ ಸೇನಾಪತಿಗಳುಂ ಆಜ್ಞಾಪಿಸಲ್ಪಟ್ಟರ್.

ಅನುವಾದಕರ ವಿವರಣೆಯಲ್ಲಿ ಇಷ್ಟು ವಿಷಯಗಳು ಬಂದಿಲ್ಲ. ಅವರ ಅನುವಾದವು ಮೂಲಪದ್ಯಕ್ಕಿಂತ ಕಠಿಣವಾಗಿದೆ.

ಸಮುಚ್ಚಯವಿದ್ದರೂ ಕಾರಕವು ಭಿನ್ನವಾಕ್ಯದಲ್ಲಿದ್ದಾಗ ಬಹುವಚನ
ಬೇಕಾದ್ದಿಲ್ಲ—ಉದಾ :

'ಪರಿಜನಮುಂ ಮಹೋತ್ಸವದೊಳೊಂದಿದುದೆಂಬುದಿದಲ್ಪದೂಷಿತಂ ॥'

'ನರಪತಿಯುಂ...' ಎಂಬುದರ ಮುಂದಿನ ವಾಕ್ಯವಿದು. 'ಪರಿಜನ' ಏಕವ
ವಾದ್ದರಿಂದ 'ಒಂದಿದುದು' ಎಂಬ ಕ್ರಿಯಾಪದ ಏಕವಚನದಲ್ಲೇ ಇದೆ. ಭಿನ್ನವಾ
ವಾದ್ದರಿಂದ 'ಕಾರಕಸಂಪದ' ಬಂದಿಲ್ಲ. ಇದು ದೋಷವಲ್ಲ.

'ಅಲ್ಪದೂಷಿತಂ' ಎಂಬುದನ್ನು ವಿವರಿಸುತ್ತ ಅನುವಾದಕರು ಇಲ್ಲಿ ವಚನಭೇ
'ದೋಷಾಭಾವಕ್ಕೆ ಲಕ್ಷ್ಯವಲ್ಲ' ಎಂದು ಬರೆದಿದ್ದಾರೆ. ಈ ಬಳಸುಮಾತಿನಲ್ಲಿ ಎರ
ನಿಷೇಧಾರ್ಥಕ ಶಬ್ದಗಳಿರುವುದರಿಂದ ಈ ವಚನಭೇದ 'ದೋಷಕ್ಕೆ ಲಕ್ಷ್ಯವೇ ಹೌದ
ಎಂದು ನಮಗೆ ಅರ್ಥವಾಗುತ್ತದೆ. ದೋಷವನ್ನು ಪರಿಹರಿಸುವುದು ಹೇಗೆ
'ಪರಿಜನಮುಂ ಮಹೋತ್ಸವದೊಳೊಂದಿದುವು' ಎಂದು ಕ್ರಿಯಾಪದಕ್ಕೆ ಬಹುವಚ
ವನ್ನಿಡಬೇಕೆ ? ಇಟ್ಟರೆ ಗುಣವೆಂದು ಅಭಿಪ್ರಾಯವಾಯಿತು ! ಭಿನ್ನವಾಕ್ಯ
ಪ್ರಸ್ತಾವವೇ ಅನಾವಶ್ಯಕವಾಗಿತ್ತು. ಹೇಗಿದ್ದರೂ 'ಕಾರಕಸಂಪದಮಂ ತಗುಳ್ಚುಗು
ಇದ್ದೇ ಇದೆಯಲ್ಲ.

ಪ್ರೊ॥ ಎಂ.ವಿ.ಸೀ.ಯವರು 'ಅಲ್ಪದೂಷಿತಂ' ಎಂಬುದನ್ನು ವಿವರಿಸು
ಉಕ್ತವಾಕ್ಯದಲ್ಲಿ 'ಕಾಣಬರುವ ವಚನಸಂಬಂಧವಾದ ವ್ಯಾಕರಣದೋಷ ಅಲ್ಪ
ಎಂದು ಬರೆದಿದ್ದಾರೆ (ಪು. ೧೭೬). ಅಲ್ಪದೋಷವನ್ನಾದರೂ ಪರಿಹರಿಸುವು
ಹೇಗೆ ? ಕ್ರಿಯಾಪದವು ಬಹುವಚನದಲ್ಲಿರಬೇಕೆ ?

ನಮ್ಮ ಪ್ರಶ್ನೆಗೆ ನಿಲುಕುವುದಿಷ್ಟು : ಭಿನ್ನವಾಕ್ಯವಾದರೆ ದೋಷವಲ್ಲವೆಂ
ದಕ್ಕೆ ಪದ್ಯದ ಕಡೆಯ ಸಾಲು ಉದಾಹರಣೆ. ಇದನ್ನೇ ಮಾರ್ಪಡಿಸಿ ಹ
ಹೇಳೋಣ—"ನರಪತಿಯೂ ನೃಪಾಂಗನೆಯರೂ ಅರಮನೆಗೆ ಹೋದರು. ಜೊತ
ಸೇವಕನೂ ಹೋದನು." ಇಲ್ಲಿ 'ಸೇವಕನೂ ಹೋದರು' ಎಂದಿರಬೇಕಾಗಿತ್ತೆ
ಇರುವ 'ಅಲ್ಪದೋಷ'ವಾದರೂ ಯಾವುದು ?

ಅಲ್ಪಶಬ್ದವು ಪ್ರಕೃತದಲ್ಲಿ ನಿಷೇಧಾರ್ಥಕ. ಅಲ್ಪಜ್ಞ–ಅಜ್ಞ ಎಂದರ್ಥ
ಅಲ್ಪಧನ–ಧನಹೀನ, ದರಿದ್ರ ಎಂದರ್ಥ. 'ಅಲ್ಪದೂಷಿತ'ವೆನ್ನುವುದಕ್ಕೆ ದೋ
ರಹಿತ ಎಂದೇ ತಾತ್ಪರ್ಯ. ಅಥವಾ 'ಇದಲ್ತು ದೂಷಿತಂ' ಎಂದು ಪಾಠಾಂತರವನ
ಕಲ್ಪಿಸಬೇಕು, ಬೇರೆ ಮಾರ್ಗವಿಲ್ಲ.

೮. "ಯಾವುದೇ ಒಂದು ಅಲಂಕಾರದಿಂದ ಜನಿಸಿದ್ದರೂ, ಅನ್ವಯಿಸಬೇಕಾ
ಅರ್ಥದಲ್ಲಿ (ಪದಗಳ) ಅನ್ವಯಸಂಬಂಧ ತುಂಬಾ ದೂರವಾಗಿಬಿಡುವುದಾದರೆ, ಅ
'ವ್ಯವಹಿತ'ವೆಂಬ ದೋಷ." (ಪು. 22)

ಅರ್ಥವಾಗಲಿ, ಅನ್ವಯವಾಗಲಿ 'ಯಾವುದೇ ಒಂದು ಅಲಂಕಾರದಿಂದ ಜನಿ
ತ್ತದೆ' ಯೆಂಬುದನ್ನು ನಾವು ಕೇಳಿಲ್ಲ. ಇದು ವಿಚಿತ್ರವಾದ ಅರ್ಥವಿವರ

'ಸವಿಶೇಷಾಲಂಕಾರೋದ್ಭವಮಾಗಿಯುಮೊಂದುವರ್ಥದೊಳ್' ಎಂದು ಮೂಲವಿದೆ. ಉದ್ಭವ=ಉತ್ಪತ್ತಿಸ್ಥಾನ, ಅಲಂಕಾರಕ್ಕೆ ಉತ್ಪತ್ತಿಸ್ಥಾನವಾಗಿದ್ದರೂ–ಎಂದು ನಾವು ಹೇಳುವ ಅರ್ಥ. ಅಥವಾ ಅಲಂಕಾರದ ಉದ್ಭವ (ಉತ್ಪತ್ತಿ) ಯಾವುದರಿಂದಲೋ ಅದು. ಇದು ಅರ್ಥಕ್ಕೆ ಅಥವಾ ಅಧ್ಯಾಹೃತವಾದ ಕಾವ್ಯಕ್ಕೆ ವಿಶೇಷಣ. ಕಾವ್ಯವು ಗುಣಾಲಂಕಾರಗಳಿಂದ ಸುಂದರವಾಗಿದ್ದರೂ, 'ವ್ಯವಹಿತ'ವು ದೋಷವೇ ಎಂದು ತಾತ್ಪರ್ಯ.

## ಕೆಲವು ದೋಷಗಳ ವಿಚಾರ

### ೯. ನ್ಯಾಯವಿರುದ್ಧ (ಪ. ೧೦೬–ಪು. 27)

'ಹೇತುವಿದ್ಯಾತ್ಮಕೋ ನ್ಯಾಯಃ' ಎಂದಿದ್ದಾನೆ ದಂಡಿ (೩–೧೬೩). ಅವನ ಪ್ರಕಾರ ಇಲ್ಲಿ ನ್ಯಾಯವೆಂದರೆ ತರ್ಕಶಾಸ್ತ್ರವೆನ್ನುವುದು ಸರಿಯೇ. ಆದರೆ ಮಾರ್ಗಕಾರನು 'ಸಮಯವಿರುದ್ಧ'ವನ್ನು ಹೇಳುವಾಗ—

**'ಆ ಕಪಿಲ–ಸುಗತ–ಕಣಚರ–ಲೋಕಾಯತಿಕಾದಿ–ಮಾರ್ಗಭೇದಂ ಸಮಯಂ'**
**(ಪ. ೧೦೫)**

ಎಂದು ಹೇಳಿದ್ದಾನೆ. ಕಣಚರಮತವಾದ ವೈಶೇಷಿಕವು ತರ್ಕಶಾಸ್ತ್ರಕ್ಕೇ ಸೇರುತ್ತದೆ. ಮತ್ತು 'ಲೋಕಾಯತಿಕಾದಿ' ಎಂದು ಆದಿಪದವಿರುವ ಪ್ರಯುಕ್ತ ತರ್ಕಶಾಸ್ತ್ರವನ್ನೆಲ್ಲ (ಜೈನ ತರ್ಕವನ್ನೂ ಸಹ) 'ಸಮಯ'ದಲ್ಲಿ ಸೇರಿಸುವುದು ಉತ್ತಮ. ಇಲ್ಲಿ ಮಾರ್ಗಕಾರನು 'ನ್ಯಾಯಃ ಶಾಸ್ತ್ರಂ ತ್ರಿವರ್ಗೋಕ್ತಿಃ ದಂಡನೀತಿಂ ಚ ತಾಂ ವಿದುಃ' ಎಂದು ಹೇಳಿರುವ ಭಾಮಹನನ್ನು (೪–೩೯) ಅನುಸರಿಸಿದ್ದಾನೆನ್ನುವುದು ಸೂಕ್ತವೆನಿಸುತ್ತದೆ.

### ೧೦. ಗಣಿತದಳೊಂದಿ ಬರ್ಪ ಪದಂ ..... (ಪ. ೧೨೨–ಪು. 34).

ಕನ್ನಡದಲ್ಲಿ ವಿಶೇಷಣ–ವಿಶೇಷ್ಯಗಳು ಜೊತೆಗೂಡಿರಬೇಕು. ಅವುಗಳ ನಡುವೆ ಅನ್ಯಪದದಿಂದ ವ್ಯವಧಾನವನ್ನು ಕಲ್ಪಿಸಕೂಡದು. ಹಾಗೆಯೇ ಸಮುಚ್ಚಯ ಸ್ಥಳದಲ್ಲಿ 'ಮರಮುಂ ಬಳ್ಳಿಗಳುಂ' ಎಂಬಂತೆ ಏಕವಚನ–ಬಹುವಚನಗಳ ಮಿಶ್ರಣ ವಿರಕೂಡದು—ಎಂದು ಸಾಮಾನ್ಯನಿಯಮ. ಆದರೆ "ಒಂದು ವಾಕ್ಯದಲ್ಲಿ ವಿಶೇಷಣಗಳು ಅನೇಕವಿದ್ದು ಸಾಲುಸಾಲಾಗಿ ಬಂದಾಗ, ವಿಶೇಷಣ–ವಿಶೇಷ್ಯಗಳ ನಡುವೆ ಪದಾಂತರ ವ್ಯವಧಾನವಿದ್ದರೆ ಅದು ಗುಣವೇ—ಕಾವ್ಯ ಶೋಭಾಕರವೇ ಹೊರತು ದೋಷವಲ್ಲ. ಹಾಗೆಯೇ ಹಲವಾರು ಸಮುಚ್ಚಯಗಳಿದ್ದಾಗ ಕಾರಕಗಳಿಗೆ ಏಕವಚನ–ಬಹುವಚನ ಮಿಶ್ರಣ ದೋಷಾವಹವಲ್ಲ. ಅಲ್ಲಿ ಏಕತ್ವ–ಬಹುತ್ವಭೇದದ ವಿಕಲ್ಪವನ್ನು ಎಣಿಸಬೇಡಿರಿ"—ಎಂದು ಮಾರ್ಗಕಾರನು ಈ ಪದ್ಯದಲ್ಲಿ ಹೇಳಿದ್ದಾನೆ.

ಮೊದಲನೆಯ ಗುಣಕ್ಕೆ ೧೨೩ನೆಯ ಪದ್ಯವನ್ನೂ ಎರಡನೆಯ ದೋಷಾಭಾವಕ
೧೨೪ನೆಯ ಪದ್ಯವನ್ನೂ ಉದಾಹರಣೆಯಾಗಿ ಕೊಟ್ಟಿದ್ದಾನೆ—

**ಗುಣಯುತನಪ್ಪನಂ ....................**

**....................**

**.. ಪರೋಪಕಾರ ಕಾ**

**ರಣಪರನಪ್ಪನಂ ಮನದೆ ಮೆಚ್ಚದರಾರ್ ಅಭಿಮಾನಿಯಪ್ಪನಂ ॥ (ಪ. ೧೨೩)**

ಇಲ್ಲಿ 'ಗುಣಯುತನಪ್ಪನಂ' ... ಇತ್ಯಾದಿ ಪಲವಾರು ವಿಶೇಷಣಗಳಿವೆ
ಕಡೆಯಲ್ಲಿರುವ 'ಅಭಿಮಾನಿಯಪ್ಪನಂ' ಎಂಬುದೇ ವಿಶೇಷ್ಯ.

ಹಿಂದಿನ ಪಲವಾರು ವಿಶೇಷಣಗಳಿಗೂ ಈ ವಿಶೇಷ್ಯಕ್ಕೂ ನಡುವೆ 'ಮನದ
ಮೆಚ್ಚದರಾರ್' ಎಂದು ಸೇರಿಸಿ ಪದಾಂತರೀಕರಣ ಮಾಡಲಾಗಿದೆ. ಪದಾಂತರೀ
ಕರಣ–ಬೇರೆ ಪದವನ್ನು ನಡುವೆ ಇಟ್ಟು ವ್ಯವಧಾನ ಮಾಡುವುದು. ಹೀಗೆ ಹೇಳಿದರ
ವಾಕ್ಯರಚನೆ ಸುಂದರವಾಗಿರುತ್ತದೆ ಎಂದು ಅಭಿಪ್ರಾಯ.

ಇಲ್ಲಿ 'ಪುರುಷನಂ' ಎಂಬ ಅಧ್ಯಾಹಾರ ಅನಾವಶ್ಯಕ. ಶಾಬ್ದಬೋಧವು
ಅಪೂರ್ಣವಾದರೆ ತಾನೆ ಅಧ್ಯಾಹಾರ ? ಅಧ್ಯಾಹಾರಕ್ಕೂ ಪ್ರಕೃತಲಕ್ಷಣಕ್ಕೂ ಯಾವ
ಸಂಬಂಧವೂ ಇಲ್ಲ. 'ಮನದೆ ಮೆಚ್ಚದರಾರ್ ನೃಪತುಂಗದೇವನಂ' ಎಂದಿದ್ದರೂ ಸಹ
ಉದಾಹರಣೆ ಸಂಗತವೇ ಆಗುತ್ತದೆ.

ಅನುವಾದಕರು ಹೇಳಿದ ಅರ್ಥ, ಲಕ್ಷಣ ಸಮನ್ವಯಗಳೆರಡೂ ಅಡ್ಡದಾರಿ
ಹಿಡಿದಿವೆ. ಅಲ್ಲದೆ, 'ನೋಡಲಿಂ' ಎಂಬುದಕ್ಕೆ 'ಕಂಡುಕೊಳ್ಳಬಹುದು' ಎಂದು
ಬರೆದಿದ್ದಾರೆ. ನೋಡಲಿಂ=ನೋಡಬೇಡಿರಿ ಎಂದರ್ಥ. ನೋಡು+ಅಲ್+ಇಂ.
ಪ್ರತಿಷೇಧಾರ್ಥದಲ್ಲಿ 'ಅಲ್' (ನೋಡಿ. ಶ.ದ.ಸೂ. ೨೪೫ ಮತ್ತು ಶಬ್ದಾನು. ಸೂ.
'ವೇಮಃ' (೫೨೭).

**೧೧. ಬೇಱಿ ವೇಱಿರೆ ವಿಕಲ್ಪ-ಸಮುಚ್ಚಯ-ಯುಗ್ಮದೊಳ್ (ಪ. ೧೩೧–ಪು. ೩೮)**

ಈ ವಾಕ್ಯಖಂಡದ ಅನುವಾದವು "ಸಮುಚ್ಚಯಗಳ (ಪ್ರಯೋಗದ) ಜೋಡಿ
ಯನ್ನುದಾಹರಿಸಿ" ಎಂದಿದೆ.

ಮೂಲಕ್ಕೆ ಇಷ್ಟು ಅರ್ಥ ಬರಲಾರದು. ಅರ್ಥವೂ ಅಸಂಗತ. ಮತ್ತು
'ವಿಕಲ್ಪ' ಬಿಟ್ಟುಹೋಗಿದೆ. "ವಿಕಲ್ಪ ಮತ್ತು ಸಮುಚ್ಚಯ—ಈ ಎರಡರ ವಿಷಯ
ದಲ್ಲಿ" ಎಂದು ಅರ್ಥ ಹೇಳುವುದು ಯುಕ್ತ. ವ್ಯತ್ಕ್ರಮವಾಗಿ ಮೊದಲು
ಸಮುಚ್ಚಯಕ್ಕೂ ಆಮೇಲೆ ವಿಕಲ್ಪಕ್ಕೂ ಗ್ರಂಥಕಾರನು ಉದಾಹರಣೆ ಕೊಟ್ಟಿದ್ದಾನೆ.

**೧೨. ಬೇಱಿವೇಱಿ ನಿಲೆ ಕಾರಕದೊಳ್ ಕ್ರಿಯೆ ..॥ (ಪ. ೧೩೪–ಪು. 40)**

ಕಾರಕದಲ್ಲನ್ವಯಿಸುವ ಕ್ರಿಯೆ ಬೇರೆಬೇರೆಯಾಗಿದ್ದಾಗ, ಒಂದೆಡೆ ಸಮುಚ್ಚಯ

ವಿದ್ದೂ ಇನ್ನೊಂದೆಡೆ ಇಲ್ಲದಿದ್ದರೆ ಸಮುಚ್ಚಯದೋಷವಿಲ್ಲ—ಎಂದು ಹೇಳಿ ಉದಾಹರಣೆಯನ್ನು ಕೊಟ್ಟಂತೆ ಕಾಣುತ್ತದೆ. ಉದಾ. :

**ಸಾಱುಗಾನೆಯುವರೆಲ್ಲರುಮಂ ನೃಪ ತಾನೆ ಮ- ।**
**ತ್ತೇಱುವಂ ಪಣೆದೊಡಾನೆಯನೆಂಬುದದೂಷಿತಂ ॥**

ಇವರ ಅನುವಾದ ಹೀಗಿದೆ : "ಆನೆಯುವರೆಲ್ಲರಿಗೂ ಸಾರಿ ಹೇಳಲಿ, ಆನೆಯನ್ನು ಸಜ್ಜು ಮಾಡಿದರೆ ಅರಸನು ಮತ್ತೆ ತಾನೇ ಏರುವನು."

ಇದೇನೋ ಸರಿ. 'ಎಲ್ಲರುಮಂ' ಎಂಬಲ್ಲಿ ಸಮುಚ್ಚಯವಿದೆ. ಇನ್ನೂ ಎಲ್ಲಿ ಸಮುಚ್ಚಯವಿರಬೇಕಾಗಿತ್ತು ? ಅದಕ್ಕೆ ಅವಕಾಶವಿದ್ದರೆ ತಾನೆ 'ಅದು ಬರದಿದ್ದರೂ ದೋಷವಲ್ಲ' ಎಂದು ಹೇಳಬೇಕಾದದ್ದು ?

ಪ್ರೊ॥ ಎಂ.ವಿ.ಸೀ.ಯವರೂ ವಿವರಣೆಯನ್ನಿತ್ತಿದ್ದಾರೆ. ನಮಗೆ ಮಾತ್ರ ಏನೇನೂ ತಿಳಿಯಲಿಲ್ಲ; ಮತ್ತು ಉದಾಹರಣೆಯಲ್ಲಿ 'ನೃಪ' ಶಬ್ದದ ಮುಂದಿರಬೇಕಾದ ಪ್ರಥಮಾವಿಭಕ್ತಿಗೆ ಲೋಪ ಹೇಗೆ ? 'ನೃಪಂ' ಎಂದಿರಬೇಡವೆ ?

೧೩. ೧೪೭ನೇ ಪದ್ಯದ ಎರಡನೆಯ ಪಾದವನ್ನು (ಪು. 45) 'ಕ್ರಮಗಮನಾಭಿಮುಖರ್ಕಳಪ್ಪ ಧೀರರ್' ಎಂದು ಪರಿಷ್ಕರಿಸಿರುವುದು ಸಮುಚಿತವಾಗಿದೆ. ಇದು ಪ್ರಶಂಸನೀಯ. ಆದರೆ 'ಕ್ರಮನಮನ' ಎಂಬ ಪಾಠಾಂತರದಲ್ಲಿ 'ಕ್ರಮ+ನ' ಇಲ್ಲಿ ಣಕಾರ ಬರಬೇಕಾಗುತ್ತಿತ್ತು ಎಂದು ಅಡಿಟಿಪ್ಪಣಿಯಲ್ಲಿ ಬರೆದಿರುವುದು ತಪ್ಪು. ಕ್ರಮ+ನಮನ ಎಂದು ಪದಚ್ಛೇದವಾದ್ದರಿಂದ ಭಿನ್ನಪದದಲ್ಲಿರುವ 'ನ'ಕಾರಕ್ಕೆ 'ಣ'ಕಾರ ಬರುವುದೇ ಇಲ್ಲ.

೧೪. **ಅತಿಶಯಧವಳೋರ್ವಿಪ ..॥ (ಪ. ೧೪೮–ಪು.** 45)

ಈ ಪದ್ಯದ ಅನುವಾದದಲ್ಲಿ ಪದವಿಭಾಗ, ಉದ್ದೇಶ್ಯ, ವಿಧೇಯ–ಇದು ಯಾವುದೂ ತಿಳಿಯದಂತೆ ಗೊಂದಲವಾಗಿದೆ. ಕಡೆಯ ಸಾಲನ್ನು 'ಸಾರಸ್ವತಗುಣದಿಂ ಕೃತಕೃತ್ಯಮಾರ್ಗನಕ್ಕುಂ' ಎಂದು ಛಂದೋಬದ್ಧವಾಗಿ ಪರಿಷ್ಕರಿಸಿರುವುದು ಶ್ಲಾಘನೀಯ. ಇದರಲ್ಲಿ ಅರ್ಥಪುಷ್ಟಿಯೂ ಉಂಟು. ಆದರೆ 'ಕೃತಕೃತ್ಯಂ+ಆರ್ಗಂ+ಅಕ್ಕುಂ' ಎಂದು ಭಂಗಶ್ಲೇಷೆಯನ್ನು ಹೇಳಿರುವುದು ವಿಚಾರಣೀಯ. ಈ ಪಕ್ಷದಲ್ಲಿ ನಪುಂಸಕ ಲಿಂಗವಾಗುವುದರಿಂದ 'ಆರ್ಗಮಕ್ಕುಂ' ಎಂದಾಗಬೇಡವೆ ?

ಕೃತಕೃತ್ಯ ಶಬ್ದಕ್ಕೆ ಕೃತಕೃತ್ಯತೆ ಎಂದು ಅರ್ಥ ಉಂಟೆ ?

ನಮ್ಮ ಅನ್ವಯಾರ್ಥ ಹೀಗೆ — 'ಅತಿಶಯಧವಳೋರ್ವಿಪೋದಿತಾಳಂಕೃತಿಮತಿಯುಂ ಕೃತಕೃತ್ಯಮಾರ್ಗನು ಅಕ್ಕುಂ' ಎಂದು. ಉಳಿದ ಪದ್ಯಭಾಗದ ಅರ್ಥ ಸುಲಭ.

ಈ ಪದ್ಯದಲ್ಲಿ 'ಶ್ರುತಯುವತಿ' ಎಂಬ ಪಾಠಕ್ಕಿಂತ 'ಶ್ರುತಿ ಯುವತಿ' ಎಂಬ ಪಾಠವೇ ಉತ್ತಮ. ಯುವತಿ ಶಬ್ದ ಸ್ತ್ರೀಲಿಂಗವಾದ್ದರಿಂದ ಸ್ತ್ರೀಲಿಂಗವಾದ ಶ್ರುತಿ ಶಬ್ದ ಇರುವುದು ನ್ಯಾಯ. ಶ್ರುತಶಬ್ದ ನಪುಂಸಕಲಿಂಗ.

## ದ್ವಿತೀಯ ಪರಿಚ್ಛೇದ

೧೫. ಮಾರ್ಗಕಾರನು ಇಲ್ಲಿ ಶಬ್ದಾಲಂಕಾರಗಳನ್ನು ಹೇಳಿ, ಮುಂದಿನ ತೃತೀಯ ಪರಿಚ್ಛೇದದಲ್ಲಿ ಅರ್ಥಾಲಂಕಾರಗಳನ್ನು ನಿರೂಪಿಸಿದ್ದಾನೆ. ಅಲಂಕಾರವಾದರೋ—

**...ಶಬ್ದಾರ್ಥಭೇದದಿಂದೆರಡಕ್ಕುಂ ॥**
**ಅನ್ನೆಗಮುದಜ್ರೊಳಗೆ ಸಮುತ್ಪನ್ನಪ್ರಾಧಾನ್ಯಮನ್ಯಮರ್ಥಾಧಾರಂ ॥**
**ಮುನ್ನಂ ಶಬ್ದಾಲಂಕಾರಂ .....** (ಪ. ೩–ಪು. 48)

ಅರ್ಥಾಲಂಕಾರವೇ ಪ್ರಧಾನವಾದ ಮೇಲೆ ಅದನ್ನು ಮೊದಲು ನಿರೂಪಿಸದೆ, ಶಬ್ದಾಲಂಕಾರವನ್ನೇ ಮೊದಲು ಹೇಳಿದ್ದು ವಿರೋಧ–ಎಂಬ ಒಂದು ಆಕ್ಷೇಪವುಂಟು. ಇದನ್ನು ಖಂಡಿಸುತ್ತ ಅನುವಾದಕಾರರು "ಅರ್ಥಾಲಂಕಾರಕ್ಕೆ ಆಧಾರಭೂತವಾದ ಶಬ್ದಾಲಂಕಾರವೇ ಪ್ರಧಾನ" ಎಂದು ಮೇಲಿನ ಪದ್ಯಕ್ಕೆ ಅರ್ಥ ಹೇಳಿದ್ದಾರೆ.

ಅರ್ಥಾಲಂಕಾರಕ್ಕೆ ಶಬ್ದಾಲಂಕಾರವು ಆಧಾರಭೂತ ಎಂಬುದು ಹೇಗೆ? ಯಾವ ಯುಕ್ತಿಯೂ ಇಲ್ಲ, ಯಾವ ಲಾಕ್ಷಣಿಕನೂ ಹೀಗೆ ಹೇಳಿಲ್ಲ. ಶಬ್ದಾಲಂಕಾರವಿಲ್ಲದೆ ಅರ್ಥಾಲಂಕಾರವೂ ಅರ್ಥಾಲಂಕಾರವಿಲ್ಲದೆ ಶಬ್ದಾಲಂಕಾರವೂ ಇರುತ್ತದೆಯೆಂಬುದು ಸುವಿದಿತ. ಅವುಗಳಿಗೆ ಅನ್ಯೋನ್ಯವಾಗಿ ಯಾವ ಸಂಬಂಧವೂ ಇಲ್ಲ. ಅನುವಾದಕರು ಹೇಳಿದ ಅರ್ಥ ಸಮಂಜಸವಲ್ಲ.

ಮತ್ತೇನೆಂದರೆ, ಅರ್ಥಜ್ಞಾನಕ್ಕೆ ಶಬ್ದವು ನಿಮಿತ್ತ. ಮೊದಲು ಶಬ್ದೋಚ್ಚರಣೆ, ಅನಂತರ ಅರ್ಥಪ್ರತೀತಿ ಎಂಬುದು ಕ್ರಮ. ಅಲ್ಲದೆ 'ಶಬ್ದಾರ್ಥಭೇದದಿಂದೆರಡಕ್ಕುಂ' ಎಂಬಲ್ಲಿ ಮೊದಲು ಶಬ್ದವನ್ನು ಹೇಳಿರುವುದರಿಂದ ಪ್ರಥಮೋಪಸ್ಥಿತವಾದ ಶಬ್ದಾಲಂಕಾರವನ್ನು ಗ್ರಂಥಕಾರನು ನಿರೂಪಿಸಿದ್ದಾನೆ. 'ಸೂಚೀಕಟಾಹನ್ಯಾಯ'ವನ್ನೂ ಇಲ್ಲಿ ಅನ್ವಯಿಸಬಹುದು. ಶಬ್ದಾಲಂಕಾರ ಪರಿಮಿತ, ಅರ್ಥಾಲಂಕಾರ ವಿಸ್ತೃತ. ಕೆಲಸಗಾರನು ಮೊದಲು ಸೂಜಿಯ ಕೆಲಸವನ್ನು ಮಾಡಿಕೊಟ್ಟು ಅನಂತರ ದೊಡ್ಡದಾದ ಕಡಾಯದ ಕೆಲಸವನ್ನು ತೆಗೆದುಕೊಳ್ಳುವಂತೆ, ಗ್ರಂಥಕಾರನು ಚಿಕ್ಕದಾದ ಶಬ್ದಾಲಂಕಾರ ಪ್ರಕರಣವನ್ನು ಮೊದಲು ತೆಗೆದುಕೊಂಡಿದ್ದಾನೆನ್ನುವುದು ಸೂಕ್ತ. ಇಂತಹ ಸಂದರ್ಭದಲ್ಲಿ ಗ್ರಂಥಕಾರನ ಇಚ್ಛೆಯೇ ನಿಯಾಮಕವೆನ್ನುವುದು ಶಾಸ್ತ್ರಪದ್ಧತಿ. ಪ್ರಧಾನವಾದ್ದನ್ನು ಮೊದಲು ಹೇಳಬೇಕೆಂಬ ನಿಯಮವೆಲ್ಲಿದೆ? ಶಬ್ದಾಲಂಕಾರವು ಪ್ರಧಾನವೂ ಅಲ್ಲ. ಇಲ್ಲಿ ಯಾವ ವಿರೋಧವೂ ಇಲ್ಲ.

ಅರ್ಥಕ್ಕೆ ಆಧಾರ ಎಂದರೆ 'ಅರ್ಥಾಲಂಕಾರಕ್ಕೆ' ಆಧಾರ ಎಂಬ ಅರ್ಥ ಲಭಿಸುವುದೂ ಇಲ್ಲ. ಅರ್ಥವೇ ಆಧಾರವಾದದ್ದು ಅರ್ಥಾಧಾರ ಎಂದು ಬಹುವ್ರೀಹಿ ಸಮಾಸವಿದು. ಅರ್ಥಾಧಾರವೆಂದರೆ ಅರ್ಥಾಲಂಕಾರವೇ. ಇದಕ್ಕೆ ವಿಪರೀತಾರ್ಥವನ್ನು ಕಲ್ಪಿಸಿದವರು ಅನುವಾದಕರೇ.

೧೬. **ಶಶಧರನಂತೊಪ್ಪಿರೆ ವಿನೋದದಿಂದುರುಮುದದಿಂ ॥** (ಪ. ೧೦–ಪು.51)

ಕ್ರಿಯಾವಿಶೇಷಣಪ್ರಯೋಗದಲ್ಲಿ ದೋಷಕ್ಕೆ ಉದಾಹರಣೆ ಇದು. "ವಿನೋದ ದಿಂದುರುಮುದದಿಂ" ಎಂಬೆರಡು ವಿಶೇಷಣಗಳು 'ಒಪ್ಪಿರೆ' ಎಂಬುದರಲ್ಲಿ ಅನ್ವಿತವಾಗ ಬೇಕಾಗಿದೆ. ಅನುವಾದಕರು "ಇಲ್ಲಿ ಎರಡೂ ಕ್ರಿಯಾವಿಶೇಷಣಗಳು ಸರಿಯಾಗಿ ಕ್ರಿಯೆಯೊಡನೆ ಅನ್ವಯಿಸುತ್ತಿಲ್ಲ" ಎಂದು ಬರೆದಿದ್ದಾರೆ. ಏಕೆ ಅನ್ವಯಿಸುತ್ತಿಲ್ಲ— ಎಂದು ಕೇಳಬಹುದೆ ? ವಿವರಣೆ ಇದಕ್ಕೆ ಬೇಕು.

'ಹೇಗೆ ಒಪ್ಪಿರೆ ?' ಎಂಬ ಆಕಾಂಕ್ಷೆಗೆ ಎರಡರಲ್ಲಿ ಒಂದು ಕ್ರಿಯಾವಿಶೇಷಣವನ್ನು ಹೇಳಿದರೂ ಆಕಾಂಕ್ಷೆ ಮುಗಿದುಹೋಗುತ್ತದೆ. ಇನ್ನೊಂದು ನಿರಾಕಾಂಕ್ಷವಾಗುವುದ ರಿಂದ ತನಗೆ ಅನ್ವಯವೆಲ್ಲಿ–ಎಂದು ಪರದಾಡಬೇಕಾಗುತ್ತದೆ. 'ನಿರಾಕಾಂಕ್ಷತ್ವ' ಎಂಬುದು ಇಲ್ಲಿರುವ ದೋಷ. ಗ್ರಂಥಕಾರನು 'ಶಶಧರನಂತೊಪ್ಪಿರೆ ವಿನೋದದಿಂ ಜನಿತಮುದಂ' ಎಂದು ತಿದ್ದಿ ಈ ದೋಷವನ್ನು ಪರಿಹರಿಸಿದ್ದಾನೆ. 'ವಿನೋದದಿಂದಲೂ ಉರುಮುದದಿಂದಲೂ ಒಪ್ಪಿರೆ' ಎಂದರೂ ದೋಷವಿಲ್ಲ. ಇಲ್ಲಿ ಸಮುಚ್ಚಯವಿರು ವುದರಿಂದ 'ಮತ್ತೂ ಹೇಗೆ ?' ಎಂದು ಇನ್ನೊಂದಕ್ಕೆ ಆಕಾಂಕ್ಷೆ ಹುಟ್ಟುತ್ತದೆ.

೧೭. "ದ್ವಿತೀಯಾವಿಭಕ್ತಿಪ್ರತ್ಯಯಾಂತಪದದ ಮುಂದೆ ಆದಿಸ್ವರವಿರುವ ಪದ ಬಂದಾಗ ಪಾದಾಂತ್ಯದಲ್ಲಿ ಮಾತ್ರ ಅದು ದೀರ್ಘವೇ ಆಗಬೇಕೆಂದು ನಿಯಮ. ಉಳಿದ ಸ್ಥಾನಗಳಲ್ಲಿ ದೀರ್ಘ ಇಲ್ಲವೆ ಹ್ರಸ್ವಗಳಲ್ಲಿ ಯಾವುದು. ಬೇಕಾದರೂ ಬರಬಹುದು." (ಪದ್ಯ ೧೬ರ ಅನುವಾದ–ಪು. 52)

ಉದಾಹೃತಪದ್ಯದ ದ್ವಿತೀಯಾರ್ಧ ಇದು–

**ಉಪಚಿತಗುಣನಾನ್ ಉಚಿತನ-**
**ನಪೇತದೋಷನನುದಾರಚರಿತೋದಯನಂ ॥**

" 'ಉಚಿತನಂ + ಅಪೇತ' ಎನ್ನುವಾಗ ಹ್ರಸ್ವಾದೇಶವು ನಿರ್ದುಷ್ಟವಾಗಿ ಬಂದಿದೆ" ಎಂದು ತಿಳಿಸಿದ್ದಾರೆ. ಮೊದಲನೆಯದಾಗಿ 'ಹ್ರಸ್ವ' ಇದ್ದೇ ಇದೆ. ಅದು ಆದೇಶವಾಗಿ ಬರಬೇಕಾಗಿಲ್ಲ. ಅದಿರಲಿ. 'ಉಚಿತನನ್' ಎಂಬುದು ಪಾದಾಂತ ದಲ್ಲಿರುವುದರಿಂದ ದೀರ್ಘವೇ ಬರಬೇಕು. ಹ್ರಸ್ವವೇ ಇಲ್ಲಿ ದುಷ್ಟ. ದೀರ್ಘ ಮಾಡಿದರೆ ಛಂದೋಭಂಗವಾಗುತ್ತದೆ. ದೀರ್ಘ ಮಾಡದಿದ್ದರೂ ಯತಿಭಂಗದೋಷ ಇದ್ದೇ ಇದೆ. ಆದ್ದರಿಂದ ನಾವು ಈ ಪಾಠವನ್ನು ಹೀಗೆ ಸೂಚಿಸುತ್ತೇವೆ :

**ಉಪಚಿತಗುಣನಾನ್ ಉಚಿತಾ-**
**ನ ಪೇತದೋಷನನುದಾರಚರಿತೋದಯನಂ ॥**

ಉಚಿತನೂ ಅನುಪೇತದೋಷನೂ (ದೋಷರಹಿತನೂ) ಆದವನೆಂದರ್ಥ. ಉಚಿತ + ಅನುಪೇತದೋಷ ಶಬ್ದಗಳಿಗೆ ಕರ್ಮಧಾರಯ ಸಮಾಸ. 'ಸ್ನಾತಾನುಲಿಪ್ತ' ಇದ್ದಂತೆ.

೧೮. **ವಿನಿಮೀಲಿತಕುಮುದವನಂ ಜನಿತೋನ್ಮೀಲಾರವಿಂದವನಲಕ್ಷ್ಮೀಕಂ ।**
**ದಿನಕರನುದಯುಂಗೆಯ್ದಂ ವಿನಿಹತ-ತಿಮಿರಂ ವಿಶಿಷ್ಟಸಂಧ್ಯಾಶ್ಲೇಷಂ ॥**
**(ಪ. ೭೪–ಪು. 69)**

ಸಮಾಹಿತಗುಣಕ್ಕೆ ಇದು ಉದಾಹರಣೆ. ಅನ್ಯಧರ್ಮವನ್ನು ಇನ್ನೊಂದರಲ್ಲಿ ಆರೋಪಿಸುವುದು ಸಮಾಹಿತ ಎಂದು ಗ್ರಂಥಕಾರನು ಹೇಳಿದ್ದಾನೆ.

ಮೂಲದಲ್ಲಿ 'ಲಕ್ಷ್ಮೀಶಂ' ಎಂದಿದ್ದುದನ್ನು ಅನುವಾದಕರು 'ಲಕ್ಷ್ಮೀಕಂ' ಎಂದು ತಿದ್ದಿದ್ದಾರೆ. ಇದಕ್ಕೆ ಅಡಿಟಿಪ್ಪಣಿ ಹೀಗಿದೆ: "ಸೂರ್ಯನಿಗೆ 'ಈಶಂ' ಎಂದು ನೇರವಾಗಿ ಅನ್ವಯಿಸಲಾರದು. ಪ್ರಸ್ತುತ ಅಲಂಕಾರಸಿದ್ಧಿಯಾಗಬೇಕಿದ್ದರೆ, ಅದು 'ವನಲಕ್ಷ್ಮಿಯುಳ್ಳವನು' ಎಂದೇ ಅನ್ವಯಿಸಬೇಕೆಂದು ಇಲ್ಲಿ ಪರಿಷ್ಕೃತ."

ಪ್ರಸ್ತುತ ಅಲಂಕಾರವೆಂದರೆ ಸಮಾಹಿತಗುಣ. 'ಜನಿತವಾದ ಅರವಿಂದ ವನಲಕ್ಷ್ಮಿಗೆ ಈಶ' ಎಂದು ಹೇಳಿದರೆ ಯಾವ ಅನ್ವಯದ ತೊಡಕಿದೆ? ಬಹುವ್ರೀಹಿ ಸಮಾಸ ಮಾಡಿದರೆ 'ವನಲಕ್ಷ್ಮಿಯುಳ್ಳವನು' ಎಂದು ಅರ್ಥವಾಗುವುದರಿಂದ ಸಮಾಹಿತಗುಣ ಸಿದ್ಧಿಸುತ್ತದೆ ಎಂಬುದು ಆಶಾಮಾತ್ರ. ಅರವಿಂದವನಲಕ್ಷ್ಮಿ ಸೂರ್ಯ ನಲ್ಲಿದೆಯೆಂದು ಯಾವ ಬುದ್ಧಿಶಾಲಿಯೂ ವರ್ಣಿಸಲಾರ. ಜನಿತವಾದ ಅರವಿಂದ ವನಲಕ್ಷ್ಮಿಯು ಯಾರಿಂದಲೋ ಎಂಬ ತೃತೀಯಾ ಬಹುವ್ರೀಹಿಯಿಂದ 'ಜನಕತ್ವ'ವು ಮಾತ್ರ ಸೂರ್ಯನಲ್ಲಿ ಲಭಿಸುತ್ತದೆ. ಜನಕತ್ವವು ಅವನ ಸ್ವಧರ್ಮವಾದ್ದರಿಂದ ಸಮಾಹಿತಗುಣ ಬರುವುದೇ ಇಲ್ಲ. 'ಲಕ್ಷ್ಮೀಶಂ' ಎಂಬುದೇ ಸರಿ. ತಿದ್ದುಪಾಠ ಸರಿಯಲ್ಲ. ಪ್ರಕೃತ ವಿಶೇಷಣದಲ್ಲಿ ನೇತ್ರಧರ್ಮವಾದ ಉನ್ಮೀಲನವನ್ನು ಅರವಿಂದದಲ್ಲಿ ಕವಿ ಹೇಳಿದ್ದಾನೆ. ಉನ್ಮೀಲನ–ವಿಕಾಸಗಳಿಗೆ ತಾದಾತ್ಮ್ಯಾಧ್ಯಾಸದಿಂದ ಈ ಪ್ರಯೋಗ ಬಂದಿದೆಯಾಗಿ ಸಮಾಹಿತಗುಣ ಸಿದ್ಧಿಸುತ್ತದೆ. ಅರವಿಂದವನಲಕ್ಷ್ಮಿಯೊಡನೆ ಅಧ್ಯಾಸ ಮಾಡಲು ಸೂರ್ಯನಲ್ಲಿರುವ ಇನ್ನೊಂದು ಧರ್ಮವಾದರೂ ಯಾವುದು?

೧೯. **ಪುರುಷೋತ್ತಮರಾರ್ ನಿನ್ನನ್ನರುದಾರರರಾತಿಸಮಿತಿಯಂ ಕೊಂದಿರ್ದುಂ ॥**
**(ಪ. ೮೦–ಪು. 71)**

ಉಪಲಬ್ಧ ಪ್ರತಿಗಳಲ್ಲಿ 'ಉದಾರಾರಾತಿಸಮಿತಿಯಂ' ಎಂದೇ ಇದೆ. 'ಉದಾರ' ಎಂಬುದನ್ನು ಶತ್ರುಗಳಿಗೆ ಅನ್ವಯಿಸುವುದಕ್ಕಿಂತ ವರ್ಣನೀಯ ರಾಜನಿಗೇ ಅನ್ವಯಿಸು ವುದು ಸೂಕ್ತವೆಂದು ಮುಳಿಯ ತಿಮ್ಮಪ್ಪಯ್ಯನವರು ಮೇಲ್ಕಂಡಂತೆ ಪರಿಷ್ಕರಿಸಿ ದ್ದಾರೆ.

ನಮ್ಮ ಅಭಿಪ್ರಾಯ ಹೀಗೆ—ಉದಾರ ಶಬ್ದಕ್ಕೆ ಔದಾರ್ಯ ಗುಣವುಳ್ಳವನು—ದಾತೃ ಎಂದೇ ಅರ್ಥವಲ್ಲ. ದೊಡ್ಡ, ಮಹಾನ್ ಎಂದೂ ಅರ್ಥವಿದೆ. 'ದೊಡ್ಡ ಶತ್ರುಸಮೂಹ' ಎಂದು ಅರ್ಥ ಹೇಳಿದರೆ ಬಾಧಕವೇನು? ಅಲ್ಲದೆ ಈ ತಿದ್ದುಪಾಠ ಯಲ್ಲಿ 'ರರರಾ' ಎಂದು ಮೂರು ರೇಫಗಳು ಶ್ರವಣಕರ್ಕಶವಾಗಿ ಸೇರಿಕೊಳ್ಳುತ್ತವೆ. ಆದ್ದರಿಂದ 'ಉದಾರಾರಾತಿ' ಎಂದಿರುವುದೇ ಮೇಲು.

೨೦. **ಪರಿದೆಯ್ದಿ ತಾಗಿದಂ ಭಾಸುರತರ–ರಘುಕುಲ–ಲಲಾಮ–ಲಕ್ಷ್ಮೀಧರನೊಳ್ ।**
**ಪರಿಕೋಪವಿಧೃತವಿಸ್ಫುರದುರು-ರಕ್ತ-ಕಠೋರ-ನಯನ-ಯುತದಶವದನಂ ।**
**(ಪ. ೯೩–ಪು. 75)**

ದ್ವಿತೀಯಾರ್ಧದಲ್ಲಿ ಸಮಾಸವಿದೆಯಷ್ಟೆ. ಈ ರೀತಿ ಸಮಾಸವನ್ನು ಬೆರೆಸಿದರೆ ಕಾವ್ಯವು ಸುಂದರವಾಗುವುದಿಲ್ಲವೆಂದೂ ಇದನ್ನು ವ್ಯಸ್ತವಾಗಿ ಹೇಳಬೇಕೆಂದೂ ಗ್ರಂಥಕಾರನ ಅಭಿಪ್ರಾಯ (ಪ. ೯೨). ಇದನ್ನು ವ್ಯಸ್ತವಾಗಿಸಿ ತಿದ್ದಿದ ಉದಾಹರಣೆ ಹೀಗಿದೆ—

**ಪರಿದೆಯ್ದಿ ತಾಗಿದಂ ಭಾಸುರತರ-ರಘುಕುಲ-ಲಲಾಮನೊಳ್ ಲಕ್ಷ್ಮಣನೊಳ್ ।**
**ಪರಿಕೋಪ-ವಶ-ಭ್ರುಮಣೋದ್ಧುರ-ರಕ್ತ-ಕಠೋರ-ಲೋಚನಂ ದಶವದನಂ ॥**

ಮೊದಲನೆಯ ಉದಾಹರಣೆಯಲ್ಲಿ ಸಮಾಸವೇಕೆ ಯುಕ್ತವಲ್ಲವೆಂದು ಮಾರ್ಗಕಾರನು ವಿವರಿಸಿದ್ದಾನೆ. ವಿವರಣೆಯಲ್ಲಿ 'ಸಮರ್ಥ, ಸಾಪೇಕ್ಷ, ಗಮಕ' ಎಂಬ ಶಬ್ದಗಳನ್ನು ಬಳಸಲಾಗಿದೆ. ಈ ಶಬ್ದಗಳ ಆಧಾರದ ಮೇಲೆ ಅನುವಾದಕರು "ಮೇಲ್ಕಂಡ ಸಮಾಸದಲ್ಲಿ ಪದವು ಸಾಪೇಕ್ಷವಾದ್ದರಿಂದ ಅಸಮರ್ಥವೆಂದೂ ಅದ್ದರಿಂದಲೇ ಸಮಾಸವು ಕೂಡದೆಂದೂ, ಗಮಕವಿದ್ದಲ್ಲಿ ಸಮಾಸಮಾಡಬಹುದೆಂದೂ, 'ಸಾಪೇಕ್ಷತ್ವೇಽಪಿ ಗಮಕತ್ವಾತ್ ಸಾಧುಃ' ಎಂಬ ಹೇಳಿಕೆಗೆ ಇದು ಕಾರಣವೆಂದೂ ವಿವರಿಸಿದ್ದಾರೆ. ಇದೆಲ್ಲವೂ 'ಭ್ರಾಂತಿವಿಲಾಸ'ವೆಂಬುದು ನಿಶ್ಚಿತ. ಸಮಾಸವೇ ಅಸಾಧುವಾದರೆ ಆತನೇ ಸಮಾಸ ಮಾಡಿ ಪ್ರಯೋಗಿಸಿದ್ದು ಹೇಗೆ? ಅಲ್ಲದೆ ಇಲ್ಲಿ ಸಮಾಸವು ಅಸಾಧುವೆಂದು ಆತನು ಹೇಳಿಯೂ ಇಲ್ಲ. ಇಲ್ಲಿ ಸಮಾಸ ಮಾಡಿದರೆ ಕಾವ್ಯಬಂಧವು ಬಂಧುರವಾಗುವುದಿಲ್ಲ ಎಂದು ಮಾತ್ರ ಹೇಳಿದ್ದಾನೆ.

'ಪರಿಕೋಪ ವಿಧೃತ...ಯುತ + ದಶವದನ' ಎಂಬಲ್ಲಿ ಸಮಾಸ ಬರಲು ಅಡ್ಡಿಯೇನಿದೆ? ಯಾವುದು ಸಾಪೇಕ್ಷ, ಯಾವುದು ಅಸಮರ್ಥ? ನೀಲೋತ್ಪಲ ಶಬ್ದದ ಕರ್ಮಧಾರಯದಂತೆ ಸರಳವಾದದ್ದು ಈ ಸಮಾಸ. ವಿಶೇಷಣವು ದೀರ್ಘವಾದರೆ ಸಮಾಸ ಬರಬಾರದೆ? ಈ ವಿವರಣೆ ಸರಿಯಲ್ಲ.

ನಮಗೆ ತೋರುವುದಿಷ್ಟು—'ದಶವದನಂ ಪರಿದೆಯ್ದಿ ತಾಗಿದಂ' ಎಂಬುದು ಪ್ರಧಾನವಾಕ್ಯ. ಅವನು ತಾಗಿದ ರಭಸವನ್ನಿಲ್ಲಿ ವರ್ಣಿಸಬೇಕಾಗಿದೆ. 'ಪರಿಕೋಪ ವಿಧೃತ...' ಇತ್ಯಾದಿ ವಿಶೇಷಣವು ಸಮಾಸದಲ್ಲಿ ಗುಣೀಭಾವವನ್ನೈದಿರುವುದರಿಂದ ರಭಸದ ಸ್ವರೂಪ ತಿಳಿಯುವುದಿಲ್ಲ. ಅನುವಾದ್ಯ ವಿಶೇಷಣವಾಗಿರುವುದೇ ಇದಕ್ಕೆ ಕಾರಣ. ಹಾಗಲ್ಲದೆ ಮೇಲ್ಕಂಡ ತಿದ್ದಿದ ಪದ್ಯದಲ್ಲಿ ಹೇಳಿರುವಂತೆ 'ಪರಿಕೋಪವಶ-ಭ್ರುಮಣೋದ್ಧುರ ರಕ್ತಕಠೋರಲೋಚನ'ನಾಗಿ 'ತಾಗಿದಂ' ಎಂದರೆ ರಭಸದ ಸ್ವರೂಪ ಸ್ಪಷ್ಟವಾಗುತ್ತದೆ. ಈ ವಿಶೇಷಣವು ವಿಧೇಯರೂಪವಾಗಿ ಬಂದಿರುವುದೇ ಇದಕ್ಕೆ ಕಾರಣ. ಅದ್ದರಿಂದ ವಿಧೇಯವಿಶೇಷಣವಾಗಿ ಹೇಳಬೇಕಾದ್ದನ್ನು ಅನುವಾದ್ಯ

ವಿಶೇಷಣವಾಗಿ ಹೇಳಿದರೆ ವಿವಕ್ಷಿತಾರ್ಥ ಪ್ರತೀತಿಯಾಗುವುದಿಲ್ಲ. ಕಾವ್ಯವು ಸುಂದ
ವಾಗುವುದಿಲ್ಲ—ಎಂದು. ಇನ್ನೊಂದು ಉದಾಹರಣೆಯಿಂದ ಇದನ್ನು ಸ್ಪಷ್ಟಪಡಿ
ಬಹುದು.

೧. ಹನುಮಂತನ ಮಾತನ್ನು ಕೇಳಿ ರಾವಣನು ಕುಪಿತನಾಗಿ ನುಡಿದನು.

೨. ಹನುಮಂತನ ಮಾತನ್ನು ಕೇಳಿ ಕುಪಿತರಾವಣನು ನುಡಿದನು.

ಇವುಗಳಲ್ಲಿ ಮೊದಲನೆಯ ವಾಕ್ಯವೇ ಉತ್ತಮವೆಂಬುದು ಸ್ಪಷ್ಟವಾಗಿದೆ.

ನವೀನರ ಮತದಲ್ಲಿ ಇದು 'ಅವಿಮೃಷ್ಟವಿಧೇಯ' ಎಂಬ ಕಾವ್ಯದೋ
ವಾಗುತ್ತದೆ (ನೋಡಿ : ಕಾವ್ಯಪ್ರಕಾಶ–ಸಪ್ತಮೋಲ್ಲಾಸ).

ಇನ್ನೊಂದು ವಿಚಾರ : ದೋಷಕ್ಕೆ ಉದಾಹೃತವಾದುದರಲ್ಲಿ 'ಲಕ್ಷ್ಮೀಧರನೊಳ
ಇದೆ. ತಿದ್ದಿದ ಉದಾಹರಣೆಯಲ್ಲಿ 'ಲಕ್ಷ್ಮಣನೊಳ್' ಇದೆ. ಈ ಬದಲಾವಣೆ
ಪ್ರಕೃತದಲ್ಲಿ 'ನಿಮಿತ್ತ'ವೇನು ? ಇದು ಉದ್ದೇಶಪೂರ್ವಕವಾದುದೇ ಎಂದು ನವ
ಎಣಿಕೆ. ಲಕ್ಷ್ಮೀಧರ–ಲಕ್ಷ್ಮಣ ಇವುಗಳ ಯೌಗಿಕಾರ್ಥದಲ್ಲಿ ಭೇದವೇನೂ ಇಲ್ಲ
ಉತ್ತಮವಾದ ಲಕ್ಷ್ಮ (ಲಕ್ಷಣ) ಉಳ್ಳವನು ಲಕ್ಷ್ಮಣ. ಮತ್ವರ್ಥೀಯ '
ಪ್ರತ್ಯಯವು 'ಣ'ತ್ವವನ್ನು ಪಡೆದಿದೆ. ಲಕ್ಷ್ಮ–ಲಕ್ಷ್ಮೀ ಎರಡೂ ಸಮಾನಾರ್ಥಕಗಳ
ರೂಢಾರ್ಥದಲ್ಲಿ ಲಕ್ಷ್ಮಣನು ರಾಮಾನುಜ. ಲಕ್ಷ್ಮೀಧರ ಶಬ್ದಕ್ಕೆ ಈ ಅರ್ಥವಿಲ್ಲ
ಆದ್ದರಿಂದ ಇಲ್ಲಿ 'ಲಕ್ಷ್ಮೀಧರ' ಎಂದು ಪ್ರಯೋಗಿಸುವುದು ಸರಿಯಲ್ಲವೆಂ
ಮಾರ್ಗಕಾರನ ಅಭಿಪ್ರಾಯ. ಅಸಮರ್ಥ ಸಮಾಸಕ್ಕೂ ಇದಕ್ಕೂ ಯಾವ ಸಂಬಂ
ಉಂಟು ? ಈ ಎಲ್ಲ ಕಾರಣಗಳಿಂದ ಮಾರ್ಗಕಾರನ ಲಕ್ಷಣಪದ್ಯಗಳಿಗೆ ಬೇರೆ ತಾತ್ಪ
ವನ್ನು ಹೇಳುವುದು ಅನಿವಾರ್ಯವಾಗಿದೆ. ನಮ್ಮ ಅರ್ಥ ಹೀಗೆ—

**೧. ಇಂತು ವಿಶೇಷ್ಯಂ ..... (ಪ. ೯೪)**

ಮೇಲ್ಕಂಡ ದೋಷದ ಉದಾಹರಣೆಯಲ್ಲಿ ವಿಶೇಷ್ಯವಾದ 'ದಶವದನ' ಶಬ್ದ
ಮಾತ್ರ ಕ್ರಿಯೆಯಲ್ಲಿ ಅನ್ವಿತವಾಗುವುದರಿಂದ (ವಿಶೇಷಣಕ್ಕೆ ಕ್ರಿಯಾನ್ವಯವಿಲ್ಲವಾ
ಕಾರಣ) ಅದು (ವಿಧೇಯ ವಿಶೇಷಣವನ್ನಪೇಕ್ಷಿಸುತ್ತದೆಯಾಗಿ) ಸಾಪೇಕ್ಷವಾಗುತ್ತ
ಸಮಾಸದಲ್ಲಿ ಸೇರಿಕೊಂಡಿರುವ ವಿಶೇಷಣಪದವು ಕ್ರಿಯಾನ್ವಯಕ್ಕೆ ಸಮರ್ಥವ
ವಾದ್ದರಿಂದ ಅಸಮರ್ಥವಾಗುತ್ತದೆ. (ವಿವಕ್ಷಿತಾರ್ಥವು ಬರದ ಇಂತಹ ಸ್ಥಳದ
ಸಮಾಸವನ್ನು ಮಾಡಬಾರದು.)

**೨. ಸಮನಿಸೆ ಸಾಪೇಕ್ಷಮುಂ ..... (ಪ. ೯೫)**

ಹೀಗೆ ಸಾಪೇಕ್ಷವಾಗಿದ್ದರೂ ವಿವಕ್ಷಿತಾರ್ಥವನ್ನು ಬೋಧಿಸುವ ಗಮಕಸಾಮ
ಏನಾದರೂ ಇದ್ದರೆ ಅಲ್ಲಿ ಸಮಾಸ ಮಾಡಬಹುದು.

ಲಕ್ಷ್ಮೀಧರ ಶಬ್ದವು ಷಷ್ಠೀತತ್ಪುರುಷಸಮಾಸವೆಂಬುದನ್ನು ಲಕ್ಷ್ಯದಲ್ಲಿ
ಬೇಕು. ಇದು ಲಕ್ಷ್ಮಣನೆಂಬ ಅರ್ಥವನ್ನು ಬೋಧಿಸಲಾರದಾದ್ದರಿಂದ ಈ ಸಮ

ಸರಿಯಲ್ಲ. ಗಮಕ ಸಾಮಗ್ರಿ ಇದ್ದರೆ ಇಂತಹ ಯೌಗಿಕ ಶಬ್ದವನ್ನು ಬಳಸಬಹುದು. 'ರಘುಕುಲಲಲಾಮ' ಈ ಶಬ್ದ ಶ್ರೀರಾಮನಲ್ಲಿ ರೂಢವಾಗಿದೆ. 'ಕುರುಕುಲತಿಲಕ' ಇದು ಕವಿ ಪ್ರಯೋಗದಿಂದ ದುರ್ಯೋಧನನಲ್ಲಿ ರೂಢವಾಗಿದೆ. ರೂಢಿಯೇ ಇಲ್ಲಿ ಗಮಕ. 'ಕುಂತೀಸುತ' ಇದು ಪ್ರಕರಣ ಬಲದಿಂದ ಪಾಂಡವರಲ್ಲೊಬ್ಬನನ್ನು ಬೋಧಿಸಬಹುದು. ಪ್ರಕರಣವೇ ಇಲ್ಲಿ ಗಮಕ. ಈ ಶಬ್ದಗಳು ಸರಿಯಾದ ಅರ್ಥವನ್ನು ಕೊಡಲು ಪ್ರಕರಣಾದಿಗಳನ್ನು ಬಯಸುವುದರಿಂದ ಸಾಪೇಕ್ಷ.

ನಾವು ಹೇಳಿದ ಅರ್ಥದಲ್ಲಿ ಸ್ವಲ್ಪ ಎಳೆದಾಟವಿದೆಯೆಂದು ನಮಗೂ ಗೊತ್ತಿದೆ. ಇದು ಅನಿವಾರ್ಯ. ಈ ಅರ್ಥವನ್ನೊಪ್ಪದಿದ್ದರೆ ಕವಿರಾಜಮಾರ್ಗಕಾರನು ಭ್ರಮಿಸಿದ್ದಾನೆ ಎಂದು ಒಪ್ಪಬೇಕು. ಅದೂ ಅನಿವಾರ್ಯ.

ಈ ಪರಿಚ್ಛೇದದಲ್ಲಿ ಬರುವ ದುಷ್ಕರ ಕಾವ್ಯಬಂಧಗಳಿಗೆ ಅನುವಾದಕರು ಅರ್ಥವನ್ನು ಬರೆದಿಲ್ಲ. ಅಪಪಾಠಗಳಿರುವುದರಿಂದ ಅರ್ಥ ಹೇಳುವುದು ತುಂಬ ಕಠಿಣವೂ ಹೌದು, ಕೆಲವೆಡೆ ಅಸಾಧ್ಯವೆನಿಸುವುದೂ ಹೌದು. ಭಾವ, ನುಸುಳು – ಮೊದಲಾದವುಗಳ ಸ್ವರೂಪವನ್ನಾದರೂ ಪರಿಚಯಮಾಡಿಕೊಡಲು ಯತ್ನಿಸಬಹುದಾಗಿತ್ತು ಎಂದು ನಮಗೆ ತೋರುತ್ತದೆ.

ಪ್ರೊ॥ ಎಂ.ವಿ. ಸೀತಾರಾಮಯ್ಯನವರು ಕವಿರಾಜಮಾರ್ಗದ ಟಿಪ್ಪಣಿಗಳಲ್ಲಿ ಇವುಗಳ ಸ್ವರೂಪವನ್ನು ತಿಳಿಸಿದ್ದಾರೆ. ಕೆಲವಕ್ಕೆ ಅರ್ಥವನ್ನೂ ಬರೆದಿದ್ದಾರೆ. ಅದನ್ನು ಪರಿಶೀಲಿಸುವುದು ಈ ಸಮೀಕ್ಷೆಯ ಪರಿಧಿಗೆ ಹೊರತಾದುದು. ಆದರೂ ಇಷ್ಟು ಹೇಳಬಹುದು—

೧. **ಗೂಢಚತುರ್ಥ** —ನಾಲ್ಕು ಗೂಢಾರ್ಥಗಳನ್ನು ಒಳಗೊಂಡಿರುವಂತೆ ಬರೆದರೆ ಗೂಢಚತುರ್ಥ ಎಂದು ಹೇಳಿದ್ದಾರೆ (ಪು ೨೬೯). ಹಾಗಲ್ಲ. ಆ ಪಕ್ಷದಲ್ಲಿ ಅದು ಅರ್ಥಾಲಂಕಾರವಾದೀತು. ಚತುರ್ಥಪಾದದ ಎಲ್ಲ ಅಕ್ಷರಗಳೂ ಮೊದಲನೆಯ ಮೂರು ಪಾದಗಳಲ್ಲಿ ಗೂಢವಾಗಿದ್ದರೆ ಗೂಢ ಚತುರ್ಥವೆನಿಸುತ್ತದೆ (ನೋಡಿ: ಶಿಶುಪಾಲವಧ ೧೯–೯೬, ಮಲ್ಲಿನಾಥ ವ್ಯಾಖ್ಯಾನ).

೨. **ಅತಾಲವ್ಯ**—ಇಕಾರ, ಯಕಾರಗಳು ತಾಲವ್ಯವಾದರೂ ಗ್ರಂಥಕಾರನು ಬಳಸಿದ್ದಾನೆ. ಇದಕ್ಕೆ 'ಅಚವರ್ಗೀಯ' ಎಂದು ಹೆಸರಿಡುವುದು ಉತ್ತಮ.

೩. **ಗೋಮೂತ್ರಿಕಾ ಬಂಧ.** ಉದಾ:—

ಜಲದಾಗಮದಿಂ ಚಿತ್ತಸ್ಖಲಿತಂ ಕೇಕಿನರ್ತನಂ ।
ಜಲದಾಗಮದಿಂ ಚಿತ್ತಸ್ಖಲಿತಂ ಕೇಳ ನಲ್ಲನಂ ॥

'ಕೇಳ ನಲ್ಲನಂ' ಎಂಬುದಕ್ಕೆ ಬದಲಾಗಿ ಕೇಕಿನರ್ತನಂ ಎಂದು ಪಾಠಾಂತರವಿದೆಯಂತೆ. ಆ ಪಕ್ಷದಲ್ಲಿ ಪೂರ್ವಾರ್ಧ–ಉತ್ತರಾರ್ಧಗಳಿಗೆ ಅರ್ಥಭೇದ ಉಂಟೆ?

ಉಂಟಾದರೆ ಇದು 'ಸಮುದ್ಗಯಮಕ' ಎನಿಸುತ್ತದೆ. (ನೋಡಿ : ಶಿಶು ೧೯–೫೮
ಮಲ್ಲಿನಾಥ ವ್ಯಾಖ್ಯಾನ). ಅರ್ಥಭೇದವಿಲ್ಲದಿದ್ದರೆ ಯಾವ ಅಲಂಕಾರವೂ ಅಲ್ಲ
'ಅಯ್ಯೊ ಅಯ್ಯೊ' ಎಂದು ಕೂಗಿಕೊಂಡಂತೆ ಇದು ! ಮೇಲೆ ಕಾಣಿಸಿದ ಪಾಠದ
'ಕೇಕಿಪರ್ತನಂ. ಕೇಳಿಸಲ್ಲನಂ' ಇಷ್ಟು ಅಂಶದಲ್ಲಿ ಮಾತ್ರ ಗೋಮೂತ್ರಿಕಾಬಂಧವಾಗ
ತ್ತದೆ. ಗೋಮೂತ್ರಿಕಾಬಂಧವು ದುಷ್ಕರವೆಂದು ಹೇಳಲ್ಪಟ್ಟಿದೆ. ಅದರ ಲಕ್ಷ
ಜೇರೆ. ಮೇಲಿನ ಉದಾಹರಣೆಯಲ್ಲಿ ಅಪಪಾಠ ಉಂಟು.

## ತೃತೀಯ ಪರಿಚ್ಛೇದ

೨೧. **ಜಿನಚರಣನಖಾದರ್ಶಂ ವಿನತಾಮರ-ರಾಜ-ರಾಜಿ-ವದನಪ್ರತಿಮಂ ॥**

**(ಪ. ೧೮–ಪು. 96)**

ಇದು ವಿಶೇಷಣರೂಪಕಕ್ಕೆ ಉದಾಹರಣೆ. "ಇಲ್ಲಿ ವಿಶೇಷಣವು ರೂಪಣ
ಗೊಂಡಿಲ್ಲವಾದ್ದರಿಂದ 'ವಿನತಾಮರರಾಜ ರಾಜವದನಪ್ರತಿಮಂ' (ನಮಸ್ಕರಿಸು
ದೇವೇಂದ್ರನ ಮುಖವೆಂಬ ಚಂದ್ರನ ಬಿಂಬವುಳ್ಳ) ಎಂಬುದಾಗಿ ತಿದ್ದಬೇಕೆಂದು
ಮುಳಿಯ ತಿಮ್ಮಪ್ಪಯ್ಯನವರು ಸೂಚಿಸಿದ್ದಾರೆ. ಇದನ್ನು ಪ್ರೊ॥ ಎಂ.ವಿ.ಸೀ.ಯವರ
ಅನುಮೋದಿಸಿದ್ದಾರೆ (ಪು. ೨೬೩).

ಇದನ್ನು ಡಾ॥ ಕೆ. ಕೃ. ಅವರು ಒಪ್ಪದೆ ವಿಶೇಷಣವೂ ರೂಪಣಗೊಂಡಿ
ಎನ್ನುತ್ತಾರೆ. ಅವರು ಬರೆದಿರುವ ಅರ್ಥ ಹೀಗೆ "ವಿನತರಾದ ದೇವತೆಗಳು ಹಾಗು
ರಾಜರ ಮುಖಗಳೆಂಬ ಪ್ರತಿಬಿಂಬಗಳನ್ನುಳ್ಳ ಜಿನಪಾದನಖವೆಂಬ ಕನ್ನಡಿ" ವಿಶೇಷ
ದಲ್ಲಿ ನಖವೆಂಬ ಆದರ್ಶ (ಕನ್ನಡಿ) ಎಂದು ರೂಪಕವಿರುವುದರಿಂದ, ಅದನ್ನು ಸಮರ್ಥಿ
ಸುವುದಕ್ಕೆ ವಿಶೇಷಣದಲ್ಲಿ ರೂಪಕ ಅವಶ್ಯಕವೆಂದೂ. ಮುಖಗಳೆಂಬ ಪ್ರತಿಬಿಂ
ಎನ್ನುವುದೇ ವಿಶೇಷಣರೂಪಕವೆಂದೂ ಇವರ ಅಭಿಪ್ರಾಯ.

ಉಭಯ ವಿದ್ವಜ್ಜನರ ವಾದವೂ ಸರಿಯಲ್ಲವೆಂದು ನಮ್ರತೆಯಿಂದ ನಿವೇದಿ
ಬೇಕಾಗಿದೆ. ವಿಶೇಷಣರೂಪಕವೆಂದರೇನು ? ವಿಶೇಷಣದಲ್ಲಿ ಮಾತ್ರ ರೂಪಕವಿ
ಬೇಕೆಂದೆ ? ವಿಶೇಷ್ಯವಾದ 'ನಖಾದರ್ಶ'ದಲ್ಲಿಯೂ ರೂಪಕವಿದೆಯಲ್ಲ ? ವಿಶೇಷ
ರೂಪಕವೆಂದೇಕೆ ಹೇಳಬಾರದು? ಅಥವಾ ಉಭಯರೂಪಕ ಎಂದೇಕೆ ಹೇಳಬಾರದು

ವಿಶೇಷಣ ನಿಮಿತ್ತಕವಾದ ರೂಪಕ ವಿಶೇಷಣರೂಪಕವೆನಿಸುತ್ತದೆ. ವದನ
ಪ್ರತಿಬಿಂಬ ಬಿದ್ದುದರಿಂದಲೇ (ಈ ರೀತಿ ವಿಶೇಷಣವನ್ನು ಕೊಟ್ಟದ್ದರಿಂದಲೇ) ನ
ವನ್ನು ಆದರ್ಶ ಎಂದು ರೂಪಿಸಲು ಸಾಧ್ಯವಾಗಿದೆ. ವಿಶೇಷಣನಿಮಿತ್ತಕವಾ
ವಿಶೇಷ್ಯದಲ್ಲಿ ರೂಪಣವಾದ್ದರಿಂದ ಇದು ವಿಶೇಷಣರೂಪಕ ಎನ್ನುವುದು ಸಾರ್ಥಕ
ಹೀಗೆಯೇ ಹೇತುರೂಪಕ, ಶ್ಲಿಷ್ಟರೂಪಕ. ಹೇತೂಪಮಾ, ಹೇತ್ವಾಕ್ಷೇಪ—ಎಂ
ಲ್ಲಿಯೂ ಹೇತು ನಿಮಿತ್ತಕ ರೂಪಕ, ಶ್ಲಿಷ್ಟ (ಶ್ಲೇಷ) ನಿಮಿತ್ತಕ ರೂಪಕ—ಎಂದ
ಅರ್ಥ ಮಾಡಬೇಕಾಗಿದೆ. 'ಕುಲಗಿರಿಯಯ್ ಗೌರವದಿಂ ನೆಲಸಯ್ ಸ್ಥೈರಣೆಯಿ

ಎಂಬುದು ಹೇತುರೂಪಕವೆಂದು ಗ್ರಂಥಕಾರ ಹೇಳಿದ್ದಾನೆ. ಇಲ್ಲಿ ಹೇತುವಿನಲ್ಲಿ ರೂಪಕ ಎಲ್ಲಿದೆ? 'ಸುರಗಿರಿವೋಲ್ ಧೈರ್ಯದಿನಂಬರಮಣಿವೋಲ್ ತೇಜದಿಂ' ಎಂಬುದು ಹೇತೂಪಮೆ. ಹೇತುವಿನಲ್ಲಿ ಉಪಮೆ ಇಲ್ಲವಷ್ಟೆ? ಹೇತುನಿಮಿತ್ತಕವಾದ ಉಪಮೆ ಹೇತೂಪಮೆಯೆಂದೇ ಅರ್ಥ ಹೇಳಬೇಕು.

ಇನ್ನು ದಂಡಿಯ ಉದಾಹರಣೆಯಲ್ಲಿ ವಿಶೇಷಣದಲ್ಲೂ ರೂಪಕವಿದೆಯೆಂಬ ಒಂದು ಶಂಕೆ ಇದೆ. ಇದು ದಂಡಿಯ ಉದಾಹರಣೆ—

**ಹರಿಪಾದಃ ಶಿರೋಲಗ್ನಜಹ್ನುಕನ್ಯಾಜಲಾಂಶುಕಃ ।**
**ಜಯತ್ಯಸುರನಿಃಶಂಕಸುರಾನಂದೋತ್ಸವಧ್ವಜಃ ॥** (II–81)

ವಾಮನಾವತಾರದಲ್ಲಿ ಮೇಲೆತ್ತಿದ ಹರಿಪಾದದ ವರ್ಣನೆ ಇದು. 'ಹರಿಪಾದವೆಂಬ ಉತ್ಸವ ಧ್ವಜ' ಎಂದು ವಿಶೇಷ್ಯದಲ್ಲಿ ರೂಪಣವಿದೆ. 'ಪಾದದ ಅಗ್ರಭಾಗದಲ್ಲಿ ಸಂಸಕ್ತವಾದ ಗಂಗಾಜಲವೆಂಬ ಶ್ವೇತಪತಾಕೆಯುಳ್ಳ' ಎಂದು ಹರಿಪಾದಧ್ವಜಕ್ಕೆ ವಿಶೇಷಣ. ಇಲ್ಲಿ 'ಜಲಾಂಶುಕ' ಎಂದು ವಿಶೇಷಣದಲ್ಲಿ ರೂಪಕವುಂಟಲ್ಲವೆ? ನಿಜ.

ಹರಿಪಾದವನ್ನು ಧ್ವಜವೆಂದು ರೂಪಿಸಬೇಕಾದರೆ ಅದಕ್ಕೆ ಪತಾಕೆ ಬೇಕು. ಪತಾಕೆಯಿಲ್ಲದೆ ಧ್ವಜವೆಂದು ರೂಪಿಸಲಾಗುವುದಿಲ್ಲ. ಅದಕ್ಕಾಗಿ ಗಂಗಾಜಲವೇ ಪತಾಕೆಯೆಂದು ಕವಿಯು ರೂಪಿಸಿಕೊಂಡಿದ್ದಾನೆ. ಈ ರೂಪಣ ಅನಿವಾರ್ಯವಾಗಿ ಬಂದಿದೆಯೇ ಹೊರತು ವಿಶೇಷಣದಲ್ಲಿಯೂ ರೂಪಕವಿರಬೇಕೆಂದಲ್ಲ. ಇಲ್ಲಿಯೂ ವಿಶೇಷಣನಿಮಿತ್ತಕವಾಗಿಯೇ ವಿಶೇಷ್ಯದಲ್ಲಿ ರೂಪಕವಿದೆ. ಪ್ರಕೃತೋದಾಹರಣೆಯ ವಿಶೇಷಣದಲ್ಲಿ ರೂಪಕವಿಲ್ಲದೆಯೇ ವಿಶೇಷ್ಯದಲ್ಲಿ ರೂಪಣ ಮಾಡುವುದು ಸಾಧ್ಯವಾಗಿರುವುದರಿಂದ ಪಾಠವನ್ನು ತಿದ್ದುವುದು ಅನಾವಶ್ಯಕ. 'ಆದರೆ ದಂಡಿಯು ವಿಶೇಷಣಸಮಗ್ರದ ರೂಪಕವೆಂದಿದ್ದಾನಲ್ಲ, ಆದ್ದರಿಂದ ವಿಶೇಷಣದಲ್ಲಿಯೂ ರೂಪಕ ಆವಶ್ಯಕ' ಎಂದು ತಿಳಿಯಬಾರದು. 'ಹರಿಪಾದದಲ್ಲಿ ಕೇವಲ ಧ್ವಜದ ರೂಪಣವಲ್ಲ, ಪತಾಕಾವಿಶಿಷ್ಟವಾದ ಧ್ವಜದ ರೂಪಣ' ಎಂದು ಅದರ ಅರ್ಥ. ಪ್ರಕೃತದಲ್ಲಿಯೂ ಪ್ರತಿಬಿಂಬವಿಶಿಷ್ಟವಾದ ಆದರ್ಶವೆಂದೇ ರೂಪಣ ಮಾಡಲಾಗಿದೆ. ವಿಶೇಷಣನಿಮಿತ್ತಕವಾದ ರೂಪಕ=ವಿಶೇಷಣರೂಪಕ ಎಂಬ ಅರ್ಥವನ್ನು ಒಪ್ಪದಿದ್ದಲ್ಲಿ ವಿಶೇಷ್ಯದಲ್ಲಿಯೂ ರೂಪಕವಿರುವುದರಿಂದ ಈ ಹೆಸರೇ ಅನರ್ಥಕವಾದೀತು.

ಡಾ॥ ಕೆ. ಕೃಷ್ಣಮೂರ್ತಿಯವರು ಹೇಳಿರುವುದೂ ಯುಕ್ತವಲ್ಲ. ಬಿಂಬವಾದ ಮುಖದಲ್ಲಿ ಅದೇ ಪ್ರತಿಬಿಂಬವೆಂದು ರೂಪಿಸಲಾಗುವುದಿಲ್ಲ. ಪ್ರತಿಬಿಂಬವೆಂಬ ಒಂದು ವಸ್ತು ಉಪಮಾನವಾಗಿ ಪ್ರಸಿದ್ಧವಿಲ್ಲದಿರುವುದೇ ಇದಕ್ಕೆ ಕಾರಣ. ಅಲ್ಲದೆ ಅರ್ಥವೂ ಬಾಧಿತವಾಗುತ್ತದೆ. ನಖಾದರ್ಶದಲ್ಲಿ ಮುಖದ ಪ್ರತಿಬಿಂಬವಿದೆಯೇ ಹೊರತು ಮುಖವಿಲ್ಲ. ಉಪಮೇಯವು ಆದರ್ಶದಲ್ಲಿದ್ದರೆ ಮಾತ್ರ ಅದು ಯುಕ್ತವಾಗುತ್ತದೆ. ಉದಾಹರಣೆಗೆ, ಮುಖಕಮಲ ಎಂಬ ರೂಪಕಕ್ಕೆ ಮುಖಾಭಿನ್ನ ಕಮಲ ಎಂದರ್ಥ.

ಮುಖವನ್ನೇ ಕಮಲವೆಂದು ತಿಳಿಯುವುದು ರೂಪಕ. ಆದರ್ಶದಲ್ಲಿ ಮುಖಾಭಿ
ಪ್ರತಿಬಿಂಬ ಇಲ್ಲ. ಆದರ್ಶದಲ್ಲಿ ಮುಖವಿದ್ದರೆ ಮಾತ್ರ ಹಾಗೆ ಹೇಳಲು ಸಾಧ್ಯ.

'ರಾಜರಾಜ' ಎಂಬ ಶಬ್ದವನ್ನು ಅನುವಾದಕರು 'ರಾಜರಾಜಿ' ಎಂ
ಪರಿಷ್ಕರಿಸಿರುವುದೂ ಅನಾವಶ್ಯಕ. ರಾಜ ಎಂದರೆ ಚಂದ್ರ. 'ಅಮರರಾಜನ ಚಂ
ಸದೃಶವಾದ ಮುಖವು ನಖಾದರ್ಶದಲ್ಲಿ ಪ್ರತಿಬಿಂಬಿತವಾಗಿದೆ' ಎಂದರೆ ಬಾಧಕವೇನ

ಏವಂಚ ಮೂಲದಲ್ಲಿರುವುದು ಸರಿಯಾಗಿದೆ. ಗೊಂದಲ ಅನಾವಶ್ಯಕ.

೨೨. **ಸತತೋದಯನಪ್ರತಿಹತಗತಿತೀವ್ರಂ ದಿನಾಧಿನಾಥನುಮಸ್ತಂ- ।**
**ಗತನಾದನಂತೆ ನಿಯತ-ಪ್ರತೀತಿಯಂ ಕಳೆಯಲಕ್ಕುಮೇ ವ್ಯಾಪಕಮಂ ॥**
**(ಪ. ೩೦–ಪು. 10**

ಇದು ಅರ್ಥಾಂತರನ್ಯಾಸಕ್ಕೆ ಉದಾಹರಣೆ. ಪ್ರಸ್ತುತವಾದ ವಿಷಯವನ
ಅಪ್ರಸ್ತುತದಿಂದ ಸಮರ್ಥಿಸುವುದು ಅರ್ಥಾಂತರನ್ಯಾಸ. 'ಸೂರ್ಯನು ಅಸ್ತಂಗ
ನಾದನು. ಸರ್ವವ್ಯಾಪಿಯಾದ ವಿಧಿನಿಯಮವನ್ನು ಮೀರಲು ಯಾರಿಗೆ ಸಾಧ್ಯ
ಇಲ್ಲಿ ಸೂರ್ಯನ ಅಸ್ತಮಯವರ್ಣನೆ ಪ್ರಕೃತ. ಇದು ವಿಶೇಷವಾಕ್ಯ. ಇದನ್ನು ಎರ
ನೆಯ ಸಾಮಾನ್ಯವಾಕ್ಯದಿಂದ ಸಮರ್ಥಿಸಲಾಗಿದೆ. ಮೊದಲನೆಯದು ಸಮರ್ಥಿ
ಎರಡನೆಯದು ಸಮರ್ಥಕ ಎನ್ನುವುದು ಸ್ಪಷ್ಟ. ಅನುವಾದದಲ್ಲಿ "ಮೊದಲನೆಯ
ವಿಶೇಷ ವಾಕ್ಯ, ಎರಡನೆಯದು ಅದರಿಂದ ಸಮರ್ಥಿತವಾದ ಸಾಮಾನ್ಯ ವಾಕ್
ಎಂದು ವಿಪರೀತವಾಗಿ ಬರೆದಿದ್ದಾರೆ. ಮುಂದೆ ಈ ಪ್ರಕರಣದಲ್ಲೆಲ್ಲ ಹೀಗಯೆ
ಸಮರ್ಥಿತವನ್ನು ಸಮರ್ಥಕವೆಂದೂ ಸಮರ್ಥಕವನ್ನು ಸಮರ್ಥಿತವೆಂದೂ ತಲೆಕೆ
ಗಾಗಿ ಬರೆದಿದ್ದಾರೆ.

೨೩. **ಪರಿಣತಗುಣರಿಂ ಕಾಂತೋತ್ಕರರಿಂ ನಿಜಸೌಖ್ಯರಿಂ ನಿಶಾನಾಯಕನುಂ**
**ನರಪಾ ನೀನುಂ** ... ... ... ... ... ॥ **(ಪ. ೪೨–ಪು. 10**

ಇದು ಶ್ಲೇಷವ್ಯತಿರೇಕಕ್ಕೆ ಉದಾಹರಣೆ.

ಇದಕ್ಕೆ "ರಾಜನೆ, ನೀನೂ ನಿಶಾನಾಥನಾದ ಚಂದ್ರನೂ ಇಬ್ಬರೂ ಪರಿಣ
ಗುಣರು. (ಇಬ್ಬರೂ) ಕಮನೀಯತೆಯಿಂದ ತುಂಬಿದವರು, (ಇಬ್ಬರೂ) ನಿಜಸೌ
ವುಳ್ಳವರು" ಎಂದು ಅರ್ಥ ಬರೆಯಲಾಗಿದೆ.

ಚಂದ್ರನು ಪರಿಣತಗುಣ ಎಂದರೇನು ? ಕಾಂತೋತ್ಕರ ಶಬ್ದಕ್ಕೆ ಕಮನೀಯ
ಯಿಂದ ತುಂಬಿದ– ಎಂಬ ಅರ್ಥ ಹೇಗೆ ಬರುತ್ತದೆ? ಚಂದ್ರಪರವಾದಾಗ 'ನಿಜಸೌ
ವುಳ್ಳವನು' ಎಂಬಲ್ಲಿ ಚಮತ್ಕಾರವೇನೂ ಕಾಣದು. ಅರ್ಥ ಅತ್ಯಂತ ಪೇಶಲವಾಗಿದ
ನಮ್ಮ ಅರ್ಥ ಹೀಗೆ—

| | | ರಾಜಪರವಾಗಿ | ಚಂದ್ರಪರವಾಗಿ |
|---|---|---|---|
| 1. | ಪರಿಣತಗುಣರ್ | ಧೈರ್ಯ, ಶೌರ್ಯಾದಿ ಮಹಾಗುಣವುಳ್ಳವನು | ವೃದ್ಧಿ, ಹ್ರಾಸ-ಎಂಬ ಬದಲಾಯಿಸುವ ಗುಣವುಳ್ಳವನು |
| 2. | ಕಾಂತೋತ್ಕರರ್ | ಕಾಂತೆಯರ ಸಮೂಹವುಳ್ಳವನು ಅಥವಾ ಕಾಂತೆಯರ ಮೇಲೆ ನೀಡಿದ ಕರ (ಕೈ) ಉಳ್ಳವನು | ರಮಣೀಯವಾದ ಉದ್ಗತ-ಚಾಚಿದ ಕಿರಣವುಳ್ಳವನು |
| 3. | ನಿಜಸೌಖ್ಯರ್ | ಸ್ವಕೀಯವಾದ ರಾಜಸೌಖ್ಯವುಳ್ಳವನು | ಸ್ವಕೀಯವಾದ ಸುಂದರ ಗಗನ ಮಾರ್ಗದಲ್ಲಿ ಸಂಚರಿಸಶಕ್ಕವನು |

(ಶೋಭನಂ ಖಂ [ಗಗನಂ] ಯಸ್ಯ ಸಃ ಸುಖಃ । ತಸ್ಯ ಭಾವಃ ಸೌಖ್ಯಂ ।
ನಿಜಂ ಸೌಖ್ಯಂ ಯಸ್ಯ ಸಃ ನಿಜಸೌಖ್ಯಃ)

೨೪. ಅಲಘುಭುಜನಾಗಿಯುಂ . ... ... ... (ಪ. ೪೩-ಪು. 105)

ಇಲ್ಲಿಯೂ 'ಅಲಘುಭುಜ. ನಿಶ್ಚಲ, ಭೂಭೃತ್, ಕಠಿನಭೋಗಾಧಾರ' ಎಂಬಲ್ಲಿ ಎರಡೆರಡು ಅರ್ಥಗಳುಂಟು. ಅನುವಾದಕರು ಇದನ್ನು ಸ್ಪಷ್ಟಪಡಿಸಬೇಕಾಗಿತ್ತು.

೨೫. **ಮದಮುದಿತಾಳಿಕದಂಬಂ ಮೃದು–ವಿಳಸಿತ–ಸರಸ–ಕೇಸರಂ–ಸರಸಿರುಹಂ ।**
**ವದನಮಿದು ಲೋಲ–ಲೋಚನ–ಮುದಿತಂ ಸ್ಮಿತ–ದಶನವಸನ**
**ರಾಗೋಪಚಿತಂ ॥** (ಪ. ೪೫-ಪು. 106)

"ಇಲ್ಲಿ ಉಪಮಾನೋಪಮೇಯಗಳಿಗೆ (ಎಂದರೆ ಕಮಲ ಹಾಗೂ ಮುಖಗಳಿಗೆ) ಸಾದೃಶ್ಯವನ್ನು ವಾಚ್ಯವಾಗಿಯೇ ಎತ್ತಿಹೇಳಿ ಅವುಗಳ ಭೇದವನ್ನು ತಿಳಿಸಿರುವುದರಿಂದ ಇದು ವಾಚ್ಯವಾಗಿರುವ ಸದೃಶವ್ಯತಿರೇಕ" ಎಂದು ವಿವರಣೆ ಇದೆ.

ಸಾದೃಶ್ಯವು ವಾಚ್ಯವಾದದ್ದು ಹೇಗೆ? ವಾಚಕ ಶಬ್ದ ಯಾವುದು? ದಂಡಿಯ ಉದಾಹರಣೆಗಳನ್ನು ಸ್ವಲ್ಪ ವಿಪರ್ಯಾಸಗೊಳಿಸಿ ಮಾರ್ಗಕಾರನು ಉದಾಹರಿಸಿದ್ದಾನೆ. 'ಫುಲ್ಲತ್ವ. ಸುರಭಿಗಂಧಿತ್ವ' ಎಂಬ ಸಮಾನಧರ್ಮಗಳನ್ನು ಅವನು ಹೇಳಿದ್ದಾನೆ. ಮಾರ್ಗಕಾರನು ಹೇಳಿಲ್ಲ. ಇದೇ ಪ್ರತೀಯಮಾನ ಸಾದೃಶ್ಯವ್ಯತಿರೇಕ ಅಥವಾ ಅರ್ಥವ್ಯತಿರೇಕ. ಅನುವಾದಕರು ಇದನ್ನು ಗಮನಿಸಿಲ್ಲ. ಮುಂದಿನ ಉದಾಹರಣೆ ಹೀಗಿದೆ—

**ಶರದಂಬರಮುಂ ಮತ್ತೀ ಸರವರಮುಂ ವಿಳಸದತನುಧವಳಚ್ಛವಿಗಳ್ ।**
**ಹರಿಣಾಂಕಾಲಂಕೃತಮಂಬರಮೀ ಕೊಳಮುಚಿತರಾಜಹಂಸೋತ್ತಂಸಂ ॥**

ಇಲ್ಲಿ ಶರತ್ಕಾಲದ ಆಕಾಶ ಮತ್ತು ಸರೋವರಗಳ ವರ್ಣನೆ ಇದೆ. ಎರಡೂ ವರ್ಣನೀಯಗಳಾದರೂ ಪರಸ್ಪರವಾಗಿ ಉಪಮಾನೋಪಮೇಯಭಾವ ವಿವಕ್ಷಿತವಾಗಿದೆ. 'ವಿಳಸದತನುಧವಳಚ್ಛವಿ' ಎಂಬ ಶಬ್ದದಿಂದ ಸಮಾನಧರ್ಮವು ಉಕ್ತವಾಗಿರುವುದರಿಂದ ಶಬ್ದತಃ ಸಾದೃಶ್ಯ ತೋರುತ್ತದೆ. ವಾಚಕಶಬ್ದವಿಲ್ಲದ್ದರಿಂದ ಇಲ್ಲಿಯೂ ಸಾದೃಶ್ಯವು ಪ್ರತೀಯಮಾನವೇ. ಸಾದೃಶ್ಯಪ್ರತೀತಿಗೆ ಇಲ್ಲಿ ಶಬ್ದಬಲವಿರುವುದರಿಂದ ಇದು ಶಾಬ್ದ. ಪೂರ್ವೋಕ್ತೋದಾಹರಣೆಯಲ್ಲಿ ಸಾದೃಶ್ಯಪ್ರತೀತಿಗೆ ಶಬ್ದಬಲವಿಲ್ಲ. ಸಾಹಚರ್ಯವೆಂಬ ಅರ್ಥದ ಬಲದಿಂದಲೇ ಸಾದೃಶ್ಯ ತೋರುತ್ತದೆ. ಆದ್ದರಿಂದ ಅದು ಆರ್ಥ. ದಂಡಿಯ ಸಂವಾದಿಶ್ಲೋಕಗಳನ್ನು ಕಂಡು ಅನುವಾದಕರು ಎಡವಿರುವುದನ್ನು ಮುಂದೆಯೂ ಕಾಣಬಹುದು. ದಂಡಿಯು ಅರ್ಥವ್ಯತಿರೇಕಕ್ಕೆ ಉದಾಹರಿಸಿದ ಚಂದ್ರೋದಯಮಂಬರೋತ್ತಂಸ...(II–194) ಎಂಬ ಉದಾಹರಣೆಯಲ್ಲಿಯೂ ಸಮಾನಧರ್ಮವನ್ನು ಹೇಳಿಲ್ಲ.

೨೬. **ಅನಲನಿನದಾಹ್ಯಕಳಂಕ–**
**ಮನನಿಳ ತಪನೀಯಧೂಳಿಯಾನಜಲಕ್ಷ್ಮಾ–**
**ಲನಮನನಾ 'ಕಲ' (ತಪ ?) ಶೋಷ್ಯಮ–**
**ನನಿಯತ–ಕರ್ದಮಮನಯಶಮಂ ತೊಱೆಗಱೆವಂ** ॥ (ಪ. ೪೮–ಪು. 107)

ತುಂಬ ಅಶುದ್ಧವಾಗಿದ್ದ ಈ ಪದ್ಯವನ್ನು ಡಾ॥ ಕೆ. ಕೃಷ್ಣಮೂರ್ತಿಗಳು ಪರಿಷ್ಕರಿಸಿರುವುದು ಪ್ರಶಂಸನೀಯ. 'ಕಲ'ಕ್ಕೆ ಪ್ರತಿಯಾಗಿ 'ತಪ' ಎಂಬ ತಿದ್ದುಪಡಿ ಗ್ರಾಹ್ಯವೆನಿಸುತ್ತದೆ. 'ಅ...ಕಳಂಕಂ' ಎಂಬಲ್ಲಿ ದ್ವಿತೀಯಾ ವಿಭಕ್ತಿ ಇದ್ದರೆ ಉತ್ತಮವಾಗುತ್ತಿತ್ತು. ಅಲ್ಲದೆ ಗಾಳಿಯಿಂದ ಧೂಳಿ 'ತಪನೀಯ'ವಾಗುವುದಿಲ್ಲ. ಅಲ್ಲಿಯೂ ತಿದ್ದುವುದು ಆವಶ್ಯಕ. ನಮ್ಮ ಪರಿಷ್ಕರಣ ಹೀಗೆ—

**ಅನಲಾದಾಹ್ಯಕಳಂಕಮ-**
**ನನಿಲಾನಪನೇಯ ಧೂಳಿಯಾನಜಲ ಕ್ಷ್ಮಾ-** ।
**ಲನಮನನಾ (ತಪ) ಶೋಷ್ಯಮ-**
**ನನಿಯತಕರ್ದಮಮನಯಶಮಂ ತೊಱೆಗಱೆವಂ** ॥

'ಕಲ' ಎಂಬುದನ್ನು 'ಕುಲ' ಎಂದು ತಿದ್ದಿದರೆ ಹೇಗೆ ? ಅನಾಕುಲಶೋಷ್ಯಂ= ಕೆಸರನ್ನು ಕದಡಿ ಒಣಗಿಸಬಹುದು, ಅಪಕೀರ್ತಿಯನ್ನು ಹಾಗೆ ಮಾಡಲಾಗುವುದಿಲ್ಲ– ಎಂಬ ಅರ್ಥ ಉಚಿತವಾಗದೆ ? ವಿದ್ವಾಂಸರು ಪರಿಶೀಲಿಸಬೇಕು.

೨೭. **ತಿರಿತರ್ಕುಮಮಳ-ಜಳನಿಧಿ-ಪರಿಖಾವೃತ–ಭೂವಿಭಾಗಮಂ ಭರದೆ ಜಳಾ-** ।
**ಕರವಿಕ್ಷೇಪಕ ಕಕುದಂತರಮಂ ಸವಿಶೇಷ ರುಚಿಯ ಸಂಭವ–ವಿಧಿಯಂ (?)** ॥
**(ಪ. ೫೫–ಪು. 110)**

ಆದಿದೀಪಕಕ್ಕೆ ಉದಾಹರಣೆ ಇದು. ಇದರಲ್ಲಿ ಕರ್ತೃಪದವೇ ಇಲ್ಲವಾದ್ದರಿಂದ

ಇದನ್ನು ಅನುವಾದಕರು ಪರಿಷ್ಕರಿಸಿದ್ದು ಉಚಿತವೇ. ದ್ವಿತೀಯಾರ್ಧದ ಅವರ ಪರಿಷ್ಕರಣ ಹೀಗೆ—

**ಕರವಿಕ್ಷೇಪಕ ಕಕುದಂತರಮಂ ಗಜಸೈನ್ಯಮಂತೆ ನಿನ್ನಯ ಗುಣಮುಂ ॥**

'ಕಕುದಂತರ' ಶಬ್ದಕ್ಕೆ ವಿವಕ್ಷಿತವಾದ 'ದಿಗಂತರಾಳ' ಎಂಬ ಅರ್ಥ ಇಲ್ಲ. ಕಕುತ್=ಎತ್ತಿನ ಹಿಣಿಲು. (ಪ್ರೊ॥ ಎಂ.ವಿ.ಸೀ. ಯವರೂ ಇದನ್ನು ಗಮನಿಸಿಲ್ಲ.) ಅಲ್ಲದೆ 'ಗಜಸೈನ್ಯಮಂತೆ ನಿನ್ನಯ ಗುಣಮುಂ' ಎಂಬ ಪರಿಷ್ಕರಣವು ಅರ್ಥಾನುಗತವಾದರೂ ಉಪಲಬ್ಧ ಪಾಠಕ್ಕೆ ಶಬ್ದಾನುಗತವಾಗಿಲ್ಲ. ನಮ್ಮ ಪರಿಷ್ಕರಣ ಹೀಗೆ— 'ಕರವಿಕ್ಷೇಪಕ ಕಕುಬಂತರಮಂ ಸವಿಶೇಷರುಚಿ ಯಶಂ ಭವದ್ವಿಧಿಯುಂ' ಅಥವಾ 'ಸವಿಶೇಷರುಚಿರಯಶಮುಂ ವಿಧಿಯುಂ'

ಕಕುಪ್=ದಿಕ್ಕು. ವಿಧಿ=ಆಜ್ಞೆ. ಭವದ್ವಿಧಿ=ನಿನ್ನ ಆಜ್ಞೆ.

೨೮. **ಸರಸಿರುಹಮಿಂದು ದೀಧಿತಿ ಪರಾಜಿತ ಶ್ರೀವಿಲಾಸಮೀ ನಿನ್ನ ಮುಖಂ ।**
**ಹರಿಣಧರವಿಜಯ ಶೋಭಾ-ಕರಮೆಂಬುದಿದೂರ್ಜಿತೋಪಮಾನವಿಭಾಗಂ ॥**
**(ಪ. ೭೧–ಪು.** 115)

ಇದು ಊರ್ಜಿತೋಪಮೆಯೆಂದು ಮಾರ್ಗಕಾರನು ಹೇಳಿದ್ದಾನೆ, ದಂಡಿಯ ಸಂವಾದಿ ಶ್ಲೋಕದಲ್ಲಿ ನಿರ್ಣಯೋಪಮೆಯೆನ್ನಲಾಗಿದೆ. ಅನುವಾದಕರು "ಇದು ನಿರ್ಣಯೋಪಮೆಯೇ ಹೌದು. ಇದು ಕಮಲವಲ್ಲ, ಮುಖವೇ ಸರಿ ಎಂದು ನಿರ್ಣಯ ಉಂಟಾಗಲು ಇಲ್ಲಿ ಕಾರಣವನ್ನು ಕೊಡಲಾಗಿದೆ. ಅರ್ಥಾಂತರ ಕಲ್ಪಿಸುವುದು ಅಸಮರ್ಥನೀಯ" ಎಂದು ಹೇಳಿದ್ದಾರೆ. ನಿರ್ಣಯೋಪಮೆಯನ್ನೇ ನಾಮಾಂತರದಿಂದ ಕರೆಯಲಾಗಿದೆ ಎಂದು ಅವರ ಅಭಿಪ್ರಾಯ.

ಪ್ರೊ॥ ಎಂ. ವಿ. ಸೀ. ಯವರು ತಮ್ಮ ಗ್ರಂಥದ ಟಿಪ್ಪಣಿಯಲ್ಲಿ "ಕಮಲದ ಸೌಂದರ್ಯವು ಚಂದ್ರಪ್ರಕಾಶಕ್ಕೆ ಕುಂದಿ ಅನೂರ್ಜಿತವಾಗಿರುವಲ್ಲಿ, (ವರ್ಣ್ಯವಾದ) ಮುಖಸೌಂದರ್ಯವು ಅದೇ ಚಂದ್ರಪ್ರಕಾಶವನ್ನು ಗೆದ್ದು ಊರ್ಜಿತವಾಗಿದೆ. ಆದ್ದರಿಂದ ಇದು ಊರ್ಜಿತೋಪಮೆ" ಎಂದು ಬರೆದಿದ್ದಾರೆ. ಇದು ಸರಿ ಎಂದು ನಮ್ಮ ಅಭಿಪ್ರಾಯ. ಆದರೆ ಅವರೇ ಕಡೆಯಲ್ಲಿ 'ನಿರ್ಣಯ. ಊರ್ಜಿತತ್ವ – ಎರಡೂ ಒಂದೇ' ಎಂದಿರುವುದು ಮಾತ್ರ (ಪು. ೨೮೪) ನಮಗೆ ಸಂಮತವಲ್ಲ.

ಮೊದಲು ಸಂಶಯವಿದ್ದರೆ ತಾನೇ ನಿರ್ಣಯ ಹುಟ್ಟಬೇಕು? ಉದಾಹೃತ ಪದ್ಯದಲ್ಲಿ ನಾಯಕನು ಪ್ರೇಯಸಿಗೆ 'ಈ ನಿನ್ನ ಮುಖಂ' ಎಂದು ನಿರ್ದೇಶಿಸಿ ಹೇಳುತ್ತಿರುವಾಗ, ಮುಖವೋ ಕಮಲವೋ ಎಂಬ ಸಂಶಯಕ್ಕೆ ಉತ್ಥಿತಿಯೇ ಇಲ್ಲ. ಸಂಶಯವಿದ್ದರಲ್ಲವೆ ನಿರ್ಣಯಕ್ಕೆ ಕಾರಣವನ್ನು ಕೊಡಬೇಕು? ದಂಡಿಯ ಶ್ಲೋಕ ಹೀಗಿದೆ—

**ನ ಪದ್ಮಸ್ಯೇಂದು ನಿಗ್ರಾಹ್ಯಸ್ಯೇಂದುಲಜ್ಜಾಕರೀ ದ್ಯುತಿಃ ।**
**ಅತಸ್ತ್ವನ್ಮುಖಮೇವೇದಮಿತ್ಯಸೌ ನಿರ್ಣಯೋಪಮಾ ॥**

"ಚಂದ್ರನಿಗೆ ಸೋತುಹೋಗುವ ಕಮಲಕ್ಕೆ ಚಂದ್ರನನ್ನೇ ನಾಚಿಸುವ ಕಾಂತಿ ಇರಲು ಶಕ್ಯವಿಲ್ಲ. ಆದ್ದರಿಂದ ಇದು ನಿನ್ನ ಮುಖವೇ ಸರಿ."

ಇಲ್ಲಿ 'ಅತಸ್ತ್ವನ್ಮುಖಮೇವೇದಂ' ಎಂದು ಹೇತುಸಹಿತವಾದ ನಿರ್ಣಾಯಕ ವಾಕ್ಯವಿರುವುದರಿಂದ, ಮೊದಲು ಸಂಶಯವನ್ನಿಲ್ಲಿ ಕಲ್ಪಿಸಿಕೊಳ್ಳಬೇಕಾಗಿದೆ. ಆದ್ದರಿಂದ ಇದು ನಿರ್ಣಯೋಪಮೆ. ಮಾರ್ಗಕಾರನ ಪದ್ಯದಲ್ಲಿ ಇಂತಹ ನಿರ್ಣಾಯಕ ವಾಕ್ಯ ಎಲ್ಲಿದೆ ? ದಂಡಿಯ ಉದಾಹರಣೆಯಲ್ಲಿ ಸಂಶಯವನ್ನು ಊಹಿಸಿಕೊಳ್ಳಬೇಕೆಂದು ಪ್ರಕಾಶ ವ್ಯಾಖ್ಯಾನದಲ್ಲಿ ಸ್ಪಷ್ಟವಾಗಿ ಬರೆದಿದೆ. 'ಉಪಮೇಯಸ್ಯ ಸಂಶಯ್ಯ ನಿಶ್ಚಯಾನ್ನಿಶ್ಚಯೋಪಮಾ' ಎಂದು ಅಗ್ನಿಪುರಾಣದ ವಚನ.

ದಂಡಿಯ ಉದಾಹರಣೆಯನ್ನು ಮಾರ್ಗಕಾರನು ಅಲ್ಲಲ್ಲಿ ಸ್ವತಂತ್ರವಾಗಿ ಮಾರ್ಪಡಿಸಿದ್ದಾನೆಂದು ನಾವು ಹಿಂದೆಯೇ ತಿಳಿಸಿದ್ದೇವೆ. ಊರ್ಜಿತೋಪಮೆಯೆಂಬುದು ಮಾರ್ಗಕಾರನ ಸ್ವತಂತ್ರ ಕಲ್ಪನೆ. ಇದು ನಿರ್ಣಯೋಪಮೆಯಲ್ಲ. ಹಾಗಿದ್ದರೆ 'ಇದು ನಿರ್ಣಯೋಪಮಾನವಿಭಾಗಂ' ಎಂದು ಹೇಳಲು ಬಾಧಕವೇನಿತ್ತು ?

೨೯. **ಅಳಿಗಳಿವು ಕಣ್ಗಳಲ್ಲಿವು ನಳಿನಮಿದೀ ವದನಮಲ್ತು ನಿಜ–ಕಾಮಿನಿಯಾ ।**
**ತಿಳಿದಿಂತು ಪೇಚ್ವೊಡಿದು ನೊಕ್ಕಳಮುಪಮಾಖ್ಯಾತಮಪ್ಪ ತತ್ತ್ವಾಖ್ಯಾನ॥**
(ಪ. ೭೬–ಪು. 117)

"ಇವು ಕಣ್ಣುಗಳಲ್ಲ, ದುಂಬಿಗಳು : ಇದು ಕಾಂತೆಯ ಮುಖವಲ್ಲ. ಕಮಲ" ಎಂದು ಹೇಳುವುದು 'ತತ್ತ್ವಾಖ್ಯಾನೋಪಮೆ'. ಇದು ದಂಡಿ II – ೩೬ನ್ನು ಅಪಾರ್ಥ ಮಾಡಿಕೊಂಡ ಅನುವಾದದಂತಿದೆ. ಇಲ್ಲಿ ಇದೇ ತತ್ತ್ವಾಖ್ಯಾನೋಪಮೆಗೆ ಕೊಟ್ಟಿರುವ ಲಕ್ಷ್ಯ ಹೀಗಿದೆ—

**ನ ಪದ್ಮಂ ಮುಖಮೇವೇದಂ ನ ಭೃಂಗೌ ಚಕ್ಷುಷೀ ಇಮೇ ।**
**ಇತಿ ವಿಸ್ಪಷ್ಟ ಸಾದೃಶ್ಯಾತ್ ತತ್ತ್ವಾಖ್ಯಾನೋಪಮೈವ ಸಾ ॥ ]"**

ಎಂದು ಹೇಳಿ ಅನುವಾದಕರು ಇನ್ನೂ ಬೆಳೆಸಿದ್ದಾರೆ.

ಅಪಾರ್ಥ ಮಾಡಿಕೊಂಡವರು ನಾವೇ. ಮಾರ್ಗಕಾರನಲ್ಲ! ಕಾಳಿದಾಸನ ವಿಕ್ರಮೋರ್ವಶೀಯದಲ್ಲಿ ವಿರಹೋನ್ಮತ್ತನಾದ ಪುರೂರವನು ನದೀ, ಲತೆ–ಮೊದಲಾದವು ಉರ್ವಶಿಯೆಂದೇ ಮೊದಲು ಭ್ರಮಿಸುತ್ತಾನೆ. ಅನಂತರ ಉರ್ವಶಿಯಲ್ಲ ಎಂಬ ನಿಶ್ಚಯಕ್ಕೆ ಬರುತ್ತಾನೆ. ಹಾಗೆಯೇ ವಿರಹೋನ್ಮತ್ತನ ವಚನವಿದು. ತಾವರೆಯ ಬಳ್ಳಿಯನ್ನು ಕಂಡು ನಿಜಕಾಮಿನಿಯೆಂದು ಭ್ರಮಿಸಿದ್ದಾನೆ, ಅನಂತರ ತಾವರೆಯ ಬಳ್ಳಿಯೆಂಬ 'ತತ್ತ್ವ'ವು ತಿಳಿಯಲಾಗಿ 'ಇವು ನಿಜಕಾಮಿನಿಯ ಕಣ್ಣುಗಳಲ್ಲ, ದುಂಬಿಗಳು : ಅವಳ ವದನವಲ್ಲ, ಕಮಲವಿದು' ಎನ್ನುತ್ತಾನೆ. ಹೀಗೆಯೇ ಇದರ ಅರ್ಥ. ತತ್ತ್ವಾಖ್ಯಾನೋಪಮೆ ಸಂಗತವಾಗಿದೆ. 'ನಿಜಕಾಮಿನಿಯಾ' ಎಂದ

ಹೇಳಿಕೊಂಡಮೇಲೆ ಅಪಹ್ನುತಿಗೆ ಅವಕಾಶವೇ ಇಲ್ಲ. ಅಪಹ್ನುತಿಯಾದರೆ 'ಇದು ತಾವರೆ ಬಳ್ಳಿ, ಕಾಮಿನಿಯಲ್ಲ' ಎಂದು ಹೇಳಲೇಬೇಕಾಗುತ್ತದೆ. ಇಲ್ಲದಿದ್ದರೆ ವ್ಯಾಹತ ವಾದೀತು. "ಇವು ನನ್ನ ಕಾಂತೆಯ ಕಣ್ಣುಗಳಲ್ಲ, ಅವಳ ದುಂಬಿಗಳು!" ಎಂದು ಯಾವ ಮೂರ್ಖ ಭ್ರಾಂತನೂ ಅಪಹ್ನವ ಮಾಡುವುದಿಲ್ಲ.

೩೦. **ವಿಪರೀತಂ ತರುಶತಿಯುವೊಲ್** ... ... ... ॥ (**ಪ. ೮೪-ಪು.** 120)

ಇದು ಸಂಧಾನೋಪಮೆಯೆಂದಿದ್ದಾನೆ ಮಾರ್ಗಕಾರ. ದಂಡಿ ಈ ಭೇದವನ್ನು ಹೇಳಿಲ್ಲ. ಶ್ಲೇಷೋಪಮೆಗೂ ಇದಕ್ಕೂ ಭೇದವೇನು? ಸಮಾನಧರ್ಮವು ಅಭಂಗ ಶ್ಲೇಷದಿಂದ ಉಪಾತ್ತವಾದರೆ ಶ್ಲೇಷೋಪಮೆಯೆಂದೂ ಸಭಂಗಶ್ಲೇಷದಿಂದ ಉಪಾತ್ತ ವಾದರೆ ಸಂಧಾನೋಪಮೆಯೆಂದೂ ಭಾವಿಸಿರಬೇಕು. ಸಭಂಗಶ್ಲೇಷದಲ್ಲಿ ವಿಭಿನ್ನಾ-ಕೃತಿಯ ಶಬ್ದರೂಪಗಳ ಸಂಧಾನ (ಸಂಯೋಜನೆ) ಇರುತ್ತದೆ. ಅಭಂಗದಲ್ಲಿ ಈ 'ಸಂಧಾನ' ಇಲ್ಲ.

'ಪದ್ಮಿನಿವೋಲ್ ಉಪಗತವಿಭ್ರಮರಹಿತಂ ಕುಪಿತಾಕೃತಿ.' ಪದ್ಮಿನೀಪಕ್ಷದಲ್ಲಿ ಅರ್ಥ ಹೇಗೆ? "ಪದ್ಮಿನಿಯಂತೆ 'ಉಪಗತವಿಭ್ರಮ'ವಿಲ್ಲದ್ದು (ಪದ್ಮಿನಿಯು ವಿಭ್ರಮ ದಿಂದ ಉಪಗತ ಎಂದರೆ ವಿಲಾಸಸಮೇತ. ಆಕೃತಿಯು ಭ್ರಾಂತಿಹೀನ ಅಥವಾ ನಿಶ್ಚಿತ)" ಎಂದು ಅನುವಾದಕರು ಬರೆದಿದ್ದಾರೆ. 'ರಹಿತ' ಶಬ್ದ ಏನಾಯಿತು? 'ವಿಲಾಸರಹಿತ' ಎಂದು ಅರ್ಥವಾಗುತ್ತದೆಯಲ್ಲ!

ಪ್ರೊ॥ ಎಂ.ವಿ.ಸೀ.ಯವರು 'ಉಪಗತವಿಭ್ರಮರಹಿತಂ' ಎಂಬುದಕ್ಕೆ ಪದ್ಮಿನೀ ಪಕ್ಷದಲ್ಲಿ 'ಸಂಚಲನವಿಲ್ಲದ್ದು, ಇದ್ದ ಕಡೆ ಇರುವುದು' ಎಂದು ಅರ್ಥ ಮಾಡಿದ್ದಾರೆ (ಪು. ೨೮೮). ವಿಭ್ರಮಶಬ್ದಕ್ಕೆ ಸಂಚಲನ ಎಂದು ಅರ್ಥವನ್ನಿಟ್ಟುಕೊಂಡಿರುವುದು ಸ್ಪಷ್ಟ, ಈ ಅರ್ಥ ಪ್ರಸಿದ್ಧವಲ್ಲ. ರೂಢಿವಿರುದ್ಧವೂ ಆಗುತ್ತದೆ. ನಮ್ಮ ಅರ್ಥ ಹೀಗೆ—

ಉಪಗತ=ಬಳಿಗೆ ಬಂದ. ವಿ=ಹಕ್ಕಿಗಳಿಗೂ, ಭ್ರಮರ=ಭ್ರಮರಗಳಿಗೂ ಹಿತ (ಪದ್ಮಿನೀ ಪಕ್ಷದಲ್ಲಿ)

೩೧. **ಪ್ರತಿವಸ್ತೂಪಮಿತಾಲಂಕೃತಮಿಂತಕ್ಕುಂ ಧರಾಧಿಪಾ ನಿನ್ನನ್ನಂ।**
**ವಿತತ-ಯಶ-ನಿಲಯ ತಾರಾಪತಿ-ದಿನಕರ-ಸದೃಶ-ತೇಜನೆಂಬುದು ಮುಂಟೆ ॥**
(**ಪ. ೮೫-ಪು.** 120)

ಇದು ಪ್ರತಿವಸ್ತೂಪಮೆ. ಪ್ರತಿ ಪದಾರ್ಥದಲ್ಲಿಯೂ ಉಪಮೆಯುಳ್ಳದ್ದು ಪ್ರತಿವಸ್ತೂಪಮೆ. ಉಪಮೇಯ ವಾಕ್ಯ. ಉಪಮಾನ ವಾಕ್ಯಗಳೆರಡಿದ್ದು ಅವುಗಳಲ್ಲಿ ಪ್ರತಿಯೊಂದು ಪದಾರ್ಥಕ್ಕೂ ಸಾದೃಶ್ಯವಿರುತ್ತದೆ. ಈ ಸಾದೃಶ್ಯ ಪ್ರತೀಯಮಾನ.

ವಾಕ್ಯಾರ್ಥಗಳಲ್ಲಿ ಒಂದೇ ಸಮಾನಧರ್ಮವಿರುತ್ತದೆ. ಕಾವ್ಯಪ್ರಕಾಶದಲ್ಲಿ '...ಪ್ರ ವಸ್ತೂಪಮಾ ತು ಸಾ।ಸಾಮಾನ್ಯಸ್ಯ ದ್ವಿರೇಕಸ್ಯ ಯತ್ರ ವಾಕ್ಯದ್ವಯೇ ಸ್ಥಿತಿಃ' ಎಂದ ಲಕ್ಷಣವನ್ನು ಹೇಳಲಾಗಿದೆ, ದಂಡಿಯು—

**ವಸ್ತು ಕಿಂಚಿದುಪನ್ಯಸ್ಯ ನ್ಯಸನಾತ್ ತತ್ಸಧರ್ಮಣಃ ।**
**ಸಾಮ್ಯಪ್ರತೀತಿರಸ್ತೀತಿ ಪ್ರತಿವಸ್ತೂಪಮಾ ಯಥಾ ॥** II-46

ಎಂದಿದ್ದಾನೆ. ಆತನ ಉದಾಹರಣೆ—

**ನೈಕೋಽಪಿ ತ್ವಾದೃಶೋಽದ್ಯಾಪಿ ಜಾಯಮಾನೇಷು ರಾಜಸು ।**
**ನನು ದ್ವಿತೀಯೋ ನಾಸ್ತ್ಯೇವ ಪಾರಿಜಾತಸ್ಯ ಪಾದಪಃ ॥**

"ರಾಜ, ಹುಟ್ಟುತ್ತಲೇ ಇರುವ ರಾಜರಲ್ಲಿ ಒಬ್ಬನೂ ನಿನಗೆ ಸಮಾನಾದವನಿಲ್ಲ ಪಾರಿಜಾತಕ್ಕೆ ಸದೃಶವಾದ ಇನ್ನೊಂದು ಮರ ಇಲ್ಲವೇ ಇಲ್ಲ."

ಇಲ್ಲಿ ವರ್ಣನೀಯ ರಾಜ–ಪಾರಿಜಾತಗಳಿಗೂ, ಇನ್ನೊಬ್ಬ ರಾಜ–ಮರಗಳಿಗೂ ಸಾದೃಶ್ಯ ಪ್ರತೀತವಾಗುತ್ತದೆ. 'ಇಲ್ಲ' ಎಂಬ ನಿಷೇಧವು ಉಭಯ ವಾಕ್ಯಗಳಲ್ಲಿರುವ ಸಮಾನ ಧರ್ಮ.

ಇದನ್ನು ಮುಂದಿನವರು ಪ್ರತ್ಯೇಕವಾದ ಅಲಂಕಾರವೆಂದು ಗಣಿಸಿದ್ದಾರೆ ಪ್ರಕೃತದಲ್ಲಿ ಮಾರ್ಗಕಾರನು ಲಕ್ಷಣವನ್ನು ಹೇಳಿಲ್ಲವಾದ್ದರಿಂದ ದಂಡಿಯ ಲಕ್ಷಣವನ್ನೇ ಅನುಸರಿಸುವುದು ಸೂಕ್ತ. ಮಾರ್ಗಕಾರನ ಉದಾಹರಣೆಯಲ್ಲಿ ವಾಕ್ಯರಚನೆ ಸರಿ ಯಾಗಿಲ್ಲ. ಕೇವಲ ಕಾವ್ಯದೃಷ್ಟಿಯಿಂದಲೂ ಅನುಚಿತವಾದ ರಚನೆ. ಕೀರ್ತಿ–ಚಂದ್ರಿಕೆಗಳಿಗೂ, ಪರಾಕ್ರಮ–ಸೂರ್ಯತೇಜಸ್ಸುಗಳಿಗೂ ಹೋಲಿಸುವುದು ಕವಿ ಸಂಪ್ರದಾಯ. ಮಾರ್ಗಕಾರನ ಉದಾಹರಣೆಯಲ್ಲಿ ಇದು ವಿವಿಕ್ತವಾಗಿ ತೋರುವುದಿಲ್ಲ ಒಂದೇ ಪದ್ಯದಲ್ಲಿ ಎಲ್ಲವನ್ನೂ ತುರುಕುವುದಕ್ಕೆ ಯತ್ನಿಸಿದ್ದರಿಂದ ಉದಾಹರಣೆ ಅಸಂಪೂರ್ಣವಾಗಿದೆ. ಪ್ರಕೃತದಲ್ಲಿ ಇದನ್ನು ವಿಶ್ಲೇಷಿಸಿದರೆ ಎರಡು ವಾಕ್ಯಗಳು ಏರ್ಪಡುತ್ತವೆ—

'ಧರಾಧಿಪ, ನಿನ್ನಂತೆ ಯಶೋನಿಧಿಯೂ ಪರಾಕ್ರಮಿಯೂ ಇನ್ನೊಬ್ಬನಿರು ವುದುಂಟೆ? ಶುಭ್ರಕಾಂತಿಯಾದ ಚಂದ್ರನಂತೆಯೂ ತೇಜೋರಾಶಿಯಾದ ಸೂರ್ಯ ನಂತೆಯೂ ಇನ್ನೊಬ್ಬನಿದ್ದಾನೆಯೆ?'

ರಾಜನಿಗೂ–ಚಂದ್ರಸೂರ್ಯರಿಗೂ, ಯಶಸ್ಸಿಗೂ–ಕಾಂತಿಗೂ, ಪರಾಕ್ರಮಕ್ಕೂ–ತೇಜಸ್ಸಿಗೂ ಸಾದೃಶ್ಯವು ಇಲ್ಲಿ ಪ್ರತೀಯಮಾನವಾಗಿದೆ. 'ಇಲ್ಲ' ಎಂಬ ನಿಷೇಧ ರೂಪವಾದ ಧರ್ಮ ಉಭಯ ವಾಕ್ಯಗಳಲ್ಲಿಯೂ ಸಮಾನ.

ಸಮಾನಧರ್ಮವು ನಿಷೇಧರೂಪವೇ ಆಗಬೇಕೆಂದೇನೂ ಇಲ್ಲ. ಕುವಲಯಾ ನಂದದಲ್ಲಿ ಪ್ರತಿವಸ್ತೂಪಮೆಯ ಉದಾಹರಣೆ ಇದು—

**ತಾಪೇನ ಭ್ರಾಜತೇ ಸೂರಃ ಶೂರಶ್ಚಾಪೇನ ರಾಜತೇ ॥**

'ಸೂರ್ಯನು ತಾಪದಿಂದ ಪ್ರಕಾಶಿಸುತ್ತಾನೆ : ಶೂರನು ಚಾಪದಿಂದ ವಿರಾಜಿಸುತ್ತಾನೆ' ಇಲ್ಲಿ 'ಪ್ರಕಾಶಿಸುವುದು' ಉಭಯತ್ರ ಸಮಾನಧರ್ಮ.

ಈ ಪ್ರಕಾರವಲ್ಲಿ ಎರಡು ವಾಕ್ಯಗಳನ್ನು ನಿರ್ಮಿಸಿಕೊಂಡು ಮಾರ್ಗಕಾರನ ಉದಾಹರಣೆಯನ್ನು ಸಮನ್ವಯಗೊಳಿಸುವುದು ಶಾಸ್ತ್ರೀಯ ಮಾರ್ಗ. ಅನುವಾದಕರು ಎತ್ತಲೋ ಸರಿದಿದ್ದಾರೆ.

೩೨. **ವರಹಂಸ–ಕದಂಬಕಮುದು ಶರದಂಬುದಮಲ್ತು ಮುಖರನೂಪುರ–ಸಂವಾ- ।**
**ದಿರವಂ ನೆಗಜ್ದಿಪ್ಪುದು ಬಂಧುರಮುದಚೀಂದಿದಟೊಳೆಂಬುದುಪಮಾಕ್ಷೇಪಂ ॥**
**(ಪ. ೧೦೩–ಪು.** 126)

ದಂಡಿ ಹೇಳಿದ ಸಂಶಯಾಕ್ಷೇಪದ ಉದಾಹರಣೆಯನ್ನು ಸ್ವಲ್ಪ ಮಾರ್ಪಡಿಸಿ ಉಪಮಾಕ್ಷೇಪವನ್ನು ಮಾರ್ಗಕಾರನು ಸ್ವತಂತ್ರವಾಗಿ ಕಲ್ಪಿಸಿದ್ದಾನೆ. ಸಂಶಯಾಕ್ಷೇಪಕ್ಕೆ ಬೇರೆ ಉದಾಹರಣೆಯನ್ನು ಕೊಟ್ಟಿದ್ದಾನೆ. ಅನುವಾದಕರು "ಉಪಮಾಕ್ಷೇಪವೆಂಬ ಗ್ರಂಥಕಾರನ ಮಾತಿಗೆ ಉಪಮಾಮೂಲ ಸಂಶಯಾಕ್ಷೇಪವೆಂದೇ ತಾತ್ಪರ್ಯವನ್ನು ಕಲ್ಪಿಸಬೇಕು. ಇಲ್ಲವೆ ಸಂಶಯಮೂಲವಾದ ಉಪಮಾಕ್ಷೇಪವೆಂದು ಕಲ್ಪಿಸಬೇಕು" ಎಂದು ಬರೆದಿದ್ದಾರೆ.

ಈ ಕಲ್ಪನೆ ಸರಿಯಲ್ಲ. ಎಲ್ಲ ಸಂಶಯಾಕ್ಷೇಪವೂ ಉಪಮಾಮೂಲವೇ ಆಗಿರುವುದರಿಂದ ಉಪಮಾಮೂಲ ಸಂಶಯಾಕ್ಷೇಪವೆನ್ನುವುದು ನಿರರ್ಥಕ. ಮುಂದೆ ಉದಾಹರಿಸಿದ ಸಂಶಯಾಕ್ಷೇಪವೂ ಉಪಮಾಮೂಲವೇ ಆಗಿದೆ. ಎಲ್ಲ ಆಕ್ಷೇಪಭೇದವಲ್ಲಿಯೂ ಸಂಶಯವನ್ನು ಕಲ್ಪಿಸಲು ಬರುವುದರಿಂದ ಸಂಶಯಮೂಲವಾದ ಉಪಮಾಕ್ಷೇಪವೆನ್ನುವುದೂ ನಿರರ್ಥಕ. ದಂಡಿಯ ಸಂಶಯಾಕ್ಷೇಪದ ಉದಾಹರಣೆಯಲ್ಲಿ (II–೧೬೪) 'ಕಿಂ, ಕಿಂ' ಎಂದು ಸಂಶಯವಾಚಕ ಶಬ್ದವಿದೆ, ಮಾರ್ಗಕಾರನ ಉದಾಹರಣೆಯಲ್ಲಿ ಅಂತಹ ವಾಚಕಶಬ್ದ ಇಲ್ಲ. ಆದ್ದರಿಂದ ಇದು ಉಪಮಾಕ್ಷೇಪ–ಎಂದು ಗ್ರಂಥಕಾರನು ಹೇಳಿರುವುದು ಸರಿಯಾಗಿಯೇ ಇದೆ.

೩೩. ವ್ಯತಿರೇಕ ಮತ್ತು ಆಕ್ಷೇಪ–ಈ ಎರಡು ಅಲಂಕಾರಗಳ ಭೇದವನ್ನು ಹೇಳುತ್ತ "ಎರಡಕ್ಕೂ ವ್ಯತ್ಯಾಸವಿಷ್ಟೆ. ವ್ಯತಿರೇಕವು ವಿಧಿರೂಪವಾಗಿದ್ದರೆ (Affirmative) ಆಕ್ಷೇಪ ನಿಷೇಧರೂಪವಾಗಿರುತ್ತದೆ (Negative) ; ವ್ಯತಿರೇಕದಲ್ಲಿ ಉಪಮೇಯದೊಡನೆ ಉಪಮಾನ ಕೂಡ ವಾಚ್ಯವಾಗಿದ್ದರೆ, ವ್ಯತಿರೇಕದಲ್ಲಿ ಉಪಮೇಯವೊಂದೇ ವಾಚ್ಯವಾಗಿರುತ್ತದೆ" ಎಂದಿದ್ದಾರೆ (ಪು. 127),

ಇವುಗಳಲ್ಲಿ ಮೊದಲನೆಯ ಹೇಳಿಕೆ ಸರಿಯಲ್ಲ. ಮಾರ್ಗಕಾರನೇ ಉದಾಹರಿಸಿರುವ ಉಭಯ ವ್ಯತಿರೇಕದಲ್ಲಿ 'ನಿಯತವೃತ್ತಸ್ಥಿತನೇಂ' ಎಂದು ನಿಷೇಧರೂಪವೂ (ಪು. 105), ಸಾಕ್ಷೇಪವ್ಯತಿರೇಕದಲ್ಲಿ 'ನೆಲಸಿಯುಮೆಯ್ದದು' ಎಂದು ನಿಷೇಧವೂ

(ಪ್ರ. 105), ಪ್ರತೀಯಮಾನ ಸಾದೃಶ್ಯ ವ್ಯತಿರೇಕವಲ್ಲಿ 'ಕಮಲವುದು ಪೋಲದು
ಎಂಬ ನಿಷೇಧವೂ (ಪು. 107) ಸ್ಪಷ್ಟವಾಗಿದೆ.

ಎರಡನೆಯ ಹೇಳಿಕೆಯೂ ಸರಿಯಲ್ಲ. (ಉಭಯತ್ರ 'ವ್ಯತಿರೇಕ–ವ್ಯತಿರೇಕ ಎಂದು ಮುದ್ರಿತವಾಗಿದೆ. ಯಾವುದೋ ಒಂದೆಡೆ ಆಕ್ಷೇಪವೆಂದಿರಬೇಕಾಗಿತ್ತು ಹೇಗಿದ್ದರೂ ಅಸಂಗತವೇ.)

೧. ಹೇತ್ವಾಕ್ಷೇಪ. ವೃತ್ತಾಕ್ಷೇಪ, ಅನುಶಯಾಕ್ಷೇಪಗಳಲ್ಲಿ ಉಪಮಾನವಿಲ್ಲ ಸಾದೃಶ್ಯಪ್ರತೀತಿಯೇ ಇಲ್ಲವಾದ್ದರಿಂದ ವರ್ಣನೀಯವು ಉಪಮೇಯವೆನಿಸುವುದೂ ಇಲ್ಲ.

೨. ಉಳಿದ ಎಲ್ಲ ಆಕ್ಷೇಪಭೇದಗಳಲ್ಲಿ ಉಪಮಾನೋಪಮೇಯಗಳೆರಡೂ ಉಂಟು. ಹಾಗೆಯೇ ವ್ಯತಿರೇಕಭೇದಗಳಲ್ಲಿ ಉಭಯವೂ ಉಂಟು.

ನಮಗೆ ತೋರುವುದು ಹೀಗೆ:—ಆಕ್ಷೇಪ ವ್ಯತಿರೇಕಗಳೆರಡರಲ್ಲಿಯೂ ವರ್ಣನೀಯ ವಸ್ತುವಿನಲ್ಲಿ ಒಂದು ವಿಶೇಷವು ತೋರುತ್ತದೆ. ಉಭಯಾಲಂಕಾರಗಳಲ್ಲಿಯೂ ಪ್ರತಿಷೇಧವು ವಾಚ್ಯವಾಗಿಯೋ ಆಕ್ಷೇಪಲಭ್ಯವಾಗಿಯೋ ಇರುತ್ತದೆ. ಆದ್ದರಿಂದ ಆಕ್ಷೇಪವನ್ನೂ ವ್ಯತಿರೇಕದ ಭೇದದಲ್ಲಿ ಸೇರಿಸಬಹುದೆಂದು ಮಾರ್ಗಕಾರನ ಅಭಿಪ್ರಾಯ. ಅಂತೆಯೇ–

**ಪ್ರತಿಪದಾರ್ಥತತ್ವಭೇದದೊಳ್**
**ಪ್ರತಿಷೇಧಮಂ ನೆಗಟ್ಟುಮನಿತೆ ಮಾಟ್ಕೆಯಿಂ ॥**

ಎಂದಿದ್ದಾನೆ. 'ಅನಿತೆ ಮಾಟ್ಕೆಯಿಂ' ಎಂಬುದು ಗಮನಾರ್ಹ. ಉಭಯಾಲಂಕಾರಗಳಿಗೂ ಪ್ರತಿಷೇಧವು ಸಮ. ಆದ್ದರಿಂದ 'ವ್ಯತಿರೇಕವಿಕಲ್ಪಮಿದು' (ಪ. ೧೦೭–ಪು. 127) ಎಂದು ಮಾರ್ಗಕಾರನ ನಿಲುವು.

೩೨. **ಗುಣದೋಷಾದಿಗಳಿಂದನುಗುಣಮಾಗಿರೆ ಪೇೞ್ದು ತದನುಸದೃಶದಿನೊಂದಂ**
**ಪ್ರಣಿಹಿತ ನಿದರ್ಶನ ಕ್ರಮವೆಣಿಸುವುದಕ್ಕುಂ ನಿದರ್ಶನಾಲಂಕಾರಂ ॥**

**(ಪ. ೧೪೩-ಪು. 137)**

"ಗುಣದೋಷಾದಿಗಳಿಂದ ಅವುಗಳಿಗೆ ಅನುಗುಣವಾದ ಫಲಿತಾಂಶವಿದೆಯೆಂದು ವರ್ಣಿಸಿ. ತತ್ಸದೃಶವಾದ ಇನ್ನೊಂದು ಸಂಗತಿಯನ್ನು ನಿದರ್ಶನವಾಗಿ ಹೇಳಿದರೆ ನಿದರ್ಶನಾಲಂಕಾರವೆನಿಸುತ್ತದೆ" ಎಂದು ಇದರ ಅರ್ಥ.

ಈ ಅಲಂಕಾರದ ವಿಷಯವಾಗಿ ಡಾ॥ ಕೆ. ಕೃಷ್ಣಮೂರ್ತಿಯವರ ವಿವರಣೆಯನ್ನೂ (ಪ್ರ. 141). ಪ್ರೊ॥ ಎಂ.ವಿ.ಸೀ.ಯವರ ಗ್ರಂಥದಲ್ಲಿನ ಟಿಪ್ಪಣಿಯನ್ನೂ (ಪ್ರ. ೩೧೯) ಅನುಲಕ್ಷಿಸಿ ಮುಂದಿನ ಮಾತನ್ನು ಹೇಳಬೇಕಾಗಿದೆ.

ಮಾರ್ಗಕಾರನು ಯಾವ ಉದಾಹರಣೆಯಲ್ಲಿ 'ಅಂತೆ, ವೊಲ್' ಮುಂತಾದ ಸಾದೃಶ್ಯವಾಚಕ ಶಬ್ದವನ್ನು ಬಳಸಿದ್ದಾನೋ ಅದು ವಾಕ್ಯಾರ್ಥೋಪಮೆಯೇ ಸರಿ.

ಅದ್ದರಿಂದಲೇ ಭಾಮಹನು ನಿದರ್ಶನಾಲಂಕಾರದಲ್ಲಿ ಸಾದೃಶ್ಯವಾಚಕ ಶಬ್ದ ಪರಿಹಾರ ವೆಂದು ಸ್ಪಷ್ಟವಾಗಿ ತಿಳಿಸಿದ್ದಾನೆ. ಅದರೆ ನಿದರ್ಶನರೂಪವಾಗಿ ಉಪಮಾನವಾಕ್ಯ ವಿದ್ದಾಗ 'ನಿದರ್ಶನ'ಕ್ಕೆ ಪ್ರಾಧಾನ್ಯವಿದ್ದರಿಂದ ಗ್ರಂಥಕಾರನು ನಿದರ್ಶನಾಲಂಕಾರವೆಂದು ಹೇಳಿದ್ದಾನೆ. ಮಾರ್ಗಕಾರನ ಅಭಿಪ್ರಾಯಕ್ಕೆ ನಾವೇನೂ ಹೇಳತಕ್ಕದ್ದಿಲ್ಲ. ಉಪಮಾ ಲಕ್ಷಣವಂತೂ ನಿರ್ಬಾಧವಾಗಿ ಈ ಉದಾಹರಣೆಗಳಲ್ಲಿ ಉಂಟು. ನಿದರ್ಶನಾಲಂಕಾರ ವೆಂದಾರಂಭಿಸಿ ದೃಷ್ಟಾಂತವೆಂದು ಮುಕ್ತಾಯ ಮಾಡಿದುದಕ್ಕೆ ಈ ಎರಡು ಶಬ್ದಗಳೂ ಪರ್ಯಾಯಪದಗಳಾಗಿರುವುದೇ ಕಾರಣ. ಇಷ್ಟುಮಾತ್ರದಿಂದ ದೃಷ್ಟಾಂತಾಲಂಕಾರದ ಬಿಂಬ ಪ್ರತಿಬಿಂಬ ಭಾವವನ್ನು ಮಾರ್ಗಕಾರನು ಮೊದಲು ಗುರುತಿಸಿದವನೆಂದು ಹೊಗಳುವುದು ಅತಿಶಯೋಕ್ತಿಯೇ ಸರಿ.

ಈ ಎರಡು ಅಲಂಕಾರಗಳಿಗಿರುವ ಭೇದ ಹೀಗೆ—

ಉಪಮಾನೋಪಮೇಯ ವಾಕ್ಯಗಳಿಗೆ ಐಕ್ಯವನ್ನು (ಅಭೇದವನ್ನು) ಆರೋಪಿಸುವುದು ನಿದರ್ಶನಾಲಂಕಾರ. ಉದಾ :-

೧. ಜಿಪುಣನನ್ನು ಸೇವಿಸುವುದೆಂದರೆ ಅರಣ್ಯದಲ್ಲಿ ರೋದಿಸುವುದೇ.

೨. ಮಂದಮತಿಯಾದ ನಾನು ಮಹಾಕಾವ್ಯವನ್ನು ರಚಿಸುವುದು. ಮುರುಕು ದೋಣಿಯಲ್ಲಿ ಮಹಾಸಾಗರವನ್ನು ದಾಟುವುದು—ಎರಡೂ ಒಂದೇ.

ಉಪಮಾನೋಪಮೇಯ ವಾಕ್ಯಗಳಲ್ಲಿ ಬೇರೆ ಬೇರೆ ಧರ್ಮಗಳು ಬಿಂಬ ಪ್ರತಿ ಭಾವದಿಂದ ನಿರ್ದಿಷ್ಟವಾಗಿದ್ದರೆ ದೃಷ್ಟಾಂತಾಲಂಕಾರ. ಈ ವಾಕ್ಯಗಳಿಗೆ ಇವರಲ್ಲಿ ಅಭೇದಾರೋಪ ಇಲ್ಲ. ಉದಾ :-

೧. ನೀನೊಬ್ಬನೇ ಕೀರ್ತಿಶಾಲಿ : ಚಂದ್ರನೊಬ್ಬನೇ ಕಾಂತಿಶಾಲಿ.
ಕೀರ್ತಿ—ಕಾಂತಿಗಳಿಗೆ ಬಿಂಬಪ್ರತಿಬಿಂಬ ಭಾವ.

೨. ಎಷ್ಟೇ ರಾಜರಿರಲಿ, ಈತನೊಬ್ಬನಿಂದಲೇ ಭೂಮಿ ರಾಜನ್ವತಿಯೆನಿಸುತ್ತದೆ.
ಎಷ್ಟೇ ನಕ್ಷತ್ರಗಳಿರಲಿ, ಚಂದ್ರನೊಬ್ಬನಿಂದಲೇ ರಾತ್ರಿ ಜ್ಯೋತಿಷ್ಮತಿಯೆನಿಸುತ್ತದೆ.

ಇಲ್ಲಿ ರಾಜರು—ನಕ್ಷತ್ರಗಳು, ರಾಜನ್ವತೀ—ಜ್ಯೋತಿಷ್ಮತೀ ಧರ್ಮಗಳಿಗೂ ಬಿಂಬ ಪ್ರತಿಬಿಂಬ ಭಾವ. ಸಾದೃಶ್ಯವಾಚಕ ಶಬ್ದ ಉಭಯಾಲಂಕಾರಗಳಲ್ಲೂ ಇಲ್ಲ.

೩೫. **ಗುಣ ಜಾತ್ಯಾದಿಗಳಿಂ ದೊರೆಯೆಣಿಸುವುದು ಸಹೋಕ್ತಿ ॥**

**(ಪ. ೧೫೫-ಪು. 141)**

ಗುಣ. ಜಾತಿ. ಕ್ರಿಯೆ. ದ್ರವ್ಯ—ಇವುಗಳೊಡನೆ ಸಹಭಾವದಿಂದ ಎರಡು ಅಥವಾ ಅಧಿಕ ವಸ್ತುಗಳಿಗೆ ಅನ್ವಯವಿದ್ದರೆ ಸಹೋಕ್ತಿಯೆಂಬ ಅಲಂಕಾರ. ದೊರೆ

ಯೆನಿಸುವುದು ಎಂದರೆ ಸಮಾನವಾಗಿ (ಸಹಭಾವದಿಂದ) ಅನ್ವಯಿಸುವುದು ಎಂದರ್ಥ
ಸಾದೃಶ್ಯವೇನೂ ಇಲ್ಲಿ ತೋರಬೇಕಾದ್ದಿಲ್ಲ. ಉದಾ–

**ಅತಿಧವಳನಾಯ್ತು ಗುಣ-ಸಂತತಿಯೊಡನೆ ಯಶೋವಿತಾನಮಾಶಾಧೀನಂ ।**
**ಸತತಂ ಪೆರ್ಚಿತ್ತು ನಿಜಾಯತಿಯೊಡನೆ ಮಹಾವಿಭೂತಿ ಪರಮೋದಯನಾ ॥**

"ಇಲ್ಲಿ 'ಜತೆಜತೆಯಾಗಿ' ಎರಡೆರಡನ್ನು–ಒಂದು ಗುಣ, ಇನ್ನೊಂದು ಜಾತಿ (
–ಹೇಳಿರುವುದರಿಂದ ಸಹೋಕ್ತಿ" ಎಂದು ಅನುವಾದಕರು ಲಕ್ಷಣಸಮನ್ವಯ ಮಾ
ದ್ದಾರೆ. ಯಾವುದು ಗುಣ, ಯಾವುದು ಜಾತಿ. ಯಾವುದಕ್ಕೆ ಎಲ್ಲಿ ಅನ್ವಯ–ಒಂದ
ತಿಳಿಯುವುದಿಲ್ಲ. "ಗುಣಸಂತತಿ, ಯಶೋವಿತಾನಗಳೆರಡೂ ಸಹಭಾವದಿಂದ (ಜೊ
ಯಾಗಿ) ಅತಿಧವಳ ಎಂಬ ಗುಣದಲ್ಲಿ ಅನ್ವಿತವಾಗಿವೆ. ನಿಜಾಯತಿ, ಮಹಾವಿಭೂ
ಗಳೆರಡೂ 'ಪೆರ್ಚಿತ್ತು' ಎಂಬ ಕ್ರಿಯೆಯಲ್ಲಿ ಅನ್ವಿತವಾಗಿವೆ" ಎಂದು ಬರೆಯುವುದು
ಸಮಂಜಸ.

೩೬. **ಅಪರಾಗಂ ಮುನಿಪತಿವೋಲ್** ... ... ॥ (**ಸ. ೧೫೮-ಪು.** 142)

"ಈ ನೃಪಶ್ರೇಷ್ಠನು ಮುನಿಪತಿಯಂತೆ 'ಅಪರಾಗ'ನು (=ಶ್ಲೇಷೆಯಿಂ
ರಾಗವಿದೂರ ಮತ್ತು ಅಕಲಂಕ)" ಎಂದು ಅರ್ಥವನ್ನು ಬರೆದಿದ್ದಾರೆ.

ಅಪರಾಗ ಶಬ್ದಕ್ಕೆ ಅಕಲಂಕ ಎಂಬ ಅರ್ಥ ಹೇಗೆ ಬರುತ್ತದೆ? ನಮ್ಮ ಅರ್ಥ
ಹೀಗೆ—

'ಪರಾಂ ಪರಸ್ತ್ರಿಯಂ ಗಚ್ಛತೀತಿ ಪರಾಗಃ' ಪರಸ್ತ್ರೀಗಾಮಿ ಎಂದರ್ಥ.
ಅಪರಾಗ=ಪರಸ್ತ್ರೀ ವಿಮುಖ. ಇದು ನೃಪಶ್ರೇಷ್ಠನಿಗೆ ವಿಶೇಷಣ.

೩೭. ಲೇಶಾಲಂಕಾರದ ಲಕ್ಷಣವನ್ನು ಕುರಿತು "ಈ ಲಕ್ಷಣ ದಂಡಿ ಹೇಳು
ಮತಾಂತರಾನುಸಾರಿಯಾಗಿದೆ. ಭಾಮಹನು ಈ ಅಲಂಕಾರವನ್ನು ಒಪ್ಪುವುದೇ ಇಲ್ಲ
ಹೋಲಿಸಿ—ದಂಡಿ II–268" ಎಂದು ಹೇಳಿದ್ದಾರೆ (ಪು. 146).

ಕವಿರಾಜಮಾರ್ಗಕಾರನ ಪ್ರಕಾರ ಒಂದು ವಸ್ತುವಿನಲ್ಲಿ ಹಲವಾರು ಗುಣಗಳನ್ನು
ಹೇಳಿ ಒಂದು ಗುಣವನ್ನು ಹೇಳಿದರೆ ಲೇಶಾಲಂಕಾರ. ಉದಾ–

೧. ಆತನು ಅಭಿಮಾನಿ, ಉದಾರಚರಿತ, ಶತ್ರುಧ್ವಂಸಕ, ಮನಸ್ವಿ. ಆದ
ಯಾರೂ ತನಗೆ ಸಮರಲ್ಲವೆಂದು ತಿಳಿದುಕೊಂಡಿದ್ದಾನೆ.

ಇಲ್ಲಿ ಅಭಿಮಾನಾದಿ ಗುಣಗಳ ಜೊತೆಗೆ ಅಹಂಕಾರವೆಂಬ ದೋಷವನ್ನು ಹೇಳಿ
ರಿಂದ ಲೇಶ.

೨. ಅವನು ಕುಲೀನನಲ್ಲ, ಬಾಂಧವ್ಯದ ಬಲವೂ ಅವನಿಗಿಲ್ಲ, ಕುರೂಪಿ, ಸ್ಥಿ
ವಾಗಿ ನಿಲ್ಲತಕ್ಕವನಲ್ಲ. ಆದರೆ ಅವನ ಛಲವೆಂದೂ ಕುಗ್ಗುವುದಿಲ್ಲ.

ಇಲ್ಲಿ ಕಡೆಯ ಮಾತಿನಿಂದ ವೃಷಸಿಷ್ಟಯಸಿವನು ಎಂಬ ಗುಣ ತಿಳಿಯುತ್ತದೆ. ಉಳಿದವು ದೋಷಗಳು. ಆದ್ದರಿಂದ ಲೇಶಾಲಂಕಾರವೆಂದು ಮಾರ್ಗಕಾರನ ಮತ.

ದಂಡಿಯು ಹೇಳುವ ಮತಾಂತರಾನುಸಾರಿಯಾದ ಲೇಶಲಕ್ಷಣವಾದರೋ ಇದಕ್ಕಿಂತ ಭಿನ್ನ.

**'ಲೇಶಮೇಕೇ ವಿದುರ್ನಿಂದಾಂ ಸ್ತುತಿಂ ವಾ ಲೇಶತಃ ಕೃತಾಂ'** (II—268).

ಇಲ್ಲಿ ಲೇಶವೆಂದರೆ ವ್ಯಾಜ. "ವ್ಯಾಜದಿಂದ ಮಾಡಿದ ನಿಂದೆ ಅಥವಾ ಸ್ತುತಿ ಲೇಶವೆನಿಸುತ್ತದೆ" ನಿಂದೆಯಿಂದ ಸ್ತುತಿಯೂ ಸ್ತುತಿಯಿಂದ ನಿಂದೆಯೂ ಪ್ರತೀತವಾದರೆ ಲೇಶ. ಇದನ್ನು ನವೀನರು 'ವ್ಯಾಜಸ್ತುತಿ' ಎಂದು ಕರೆದಿದ್ದಾರೆ. ನವೀನರ ಲೇಶದ ಲಕ್ಷಣವೇ ಬೇರೆ. 'ದೋಷವನ್ನು ಗುಣವೆಂದೂ ಗುಣವನ್ನು ದೋಷವೆಂದೂ ಪ್ರಕಾರಾಂತರದಿಂದ ಕಲ್ಪಿಸುವುದು ಲೇಶ'—ಇದು ನವೀನರ ಮತ.

ದಂಡಿಯ ಮತದಂತೆ ಉದಾಹರಣೆ ಹೀಗೆ ಇರುತ್ತದೆ. "ಈ ರಾಜನು ಯುವಕ. ಓಜಸ್ವಿ. ನಿನಗೆ ಪತಿಯಾಗಲು ಯೋಗ್ಯ. ಕಾಮೋತ್ಸವಕ್ಕಿಂತ ರಣೋತ್ಸವದಲ್ಲಿ ಇವನ ಮನಸ್ಸು ನೆಟ್ಟಿದೆ." ಸ್ವಯಂವರ ಮಂಟಪವನ್ನು ಪ್ರವೇಶಿಸಿರುವ ವಧುವಿಗೆ ಅವಳ ಸಖಿ ಹೇಳುವ ಮಾತಿದು. ಇದರಲ್ಲಿ ರಾಜನ ಗುಣಗಳು ವರ್ಣಿತವಾಗಿವೆ. ಕಡೆಯ ಮಾತಿನಲ್ಲಿ ಈ ರಾಜನು ವೀರನೆಂದು ಮೇಲ್ನೋಟಕ್ಕೆ ಸ್ತುತಿ ಇದ್ದರೂ "ಇವನು ಯುದ್ಧಲಂಪಟ. ಇವನಿಂದ ನಿನಗೆ ಕಾಮಸುಖ ಲಭ್ಯವಿಲ್ಲ. ಇವನನ್ನು ವರಿಸಬೇಡ" ಎಂಬ ಅರ್ಥ ಪ್ರತೀತವಾಗುತ್ತದೆ. ಇಲ್ಲಿ ವ್ಯಾಜದಿಂದ ಗುಣವನ್ನು ವರ್ಣಿಸಿ ದೋಷವನ್ನು ವ್ಯಂಜಿಸಿರುವುದರಿಂದ ಲೇಶ.

ದಂಡಿಯ ಲೇಶಕ್ಕೂ ಮಾರ್ಗಕಾರನ ಲೇಶಕ್ಕೂ ಅಜಗಜಾಂತರ ಉಂಟು. ಭಾಮಹನು ಖಂಡಿಸಿದ್ದು ಮಾರ್ಗಕಾರನ ಲೇಶವನ್ನು ಎಂದು ನಮ್ಮ ಅಭಿಪ್ರಾಯ. ಭಾಮಹನಿಗಿಂತ ಪೂರ್ವದಲ್ಲಿ ಈ ಪ್ರಕಾರವನ್ನು ಲೇಶವೆಂದು ಕೆಲವರು ಹೇಳಿರಬಹುದು. ಮಾರ್ಗಕಾರನ ಉದಾಹರಣೆಯಲ್ಲಿ ಯಾವ ಚಮತ್ಕಾರವೂ ಇಲ್ಲವೆಂಬುದು ಸ್ಪಷ್ಟ. ಅಲಂಕಾರವೆನಿಸಬೇಕಾದರೆ ಚಮತ್ಕಾರಿಯಾದ ವಕ್ರೋಕ್ತಿ ಇರಬೇಕೆಂದು ಭಾಮಹನು ಹೇಳಿದ್ದಾನೆ. ದಂಡಿಯ ಉದಾಹರಣೆಯಲ್ಲೂ ನವೀನರ ಲೇಶಾಲಂಕಾರದಲ್ಲಿಯೂ ಚಮತ್ಕಾರವನ್ನು ಯಾವ ರಸಿಕನೂ ಅಲ್ಲಗಳೆಯಲಾರ. 'ಲೇಶ' ಎಂಬ ಶಬ್ದಮಾತ್ರದಿಂದ ಎಲ್ಲರೂ ಹೇಳಿದ್ದು ಒಂದೇ ಎಂದು ಭ್ರಮಿಸಬಾರದು.

೩೮. **ಕರೆಕರೆದು ಮನೋಧೃತಿಯಂ ನೆರೆವಾಸೆಯೊಳಿರ್ದಳಲ್ಲದುಟಿಂದೊಡೆ ನಿನ್ನಾ ।**
**ವಿರಹಾನಳನಾ ತಾಪದೆ ಕರಗುಗುಮಿನ್ನಾಕೆಗಿನಿಸು ಕರುಣೆಸು ಮನದೊಳ್॥**

(ಪ. ೧೯೨-ಪು. 153)

ಇಲ್ಲಿ ತೋರತಕ್ಕದ್ದು 'ಕರುಣಾ'ರಸವೇ ಹೊರತು 'ಕರುಣ'ರಸವಲ್ಲವೆಂದೂ

ಉದ್ದೀಪ್ತ ಸ್ಥಾಯಿಭಾವ ದಯೆಯೇ ಹೊರತು ಶೋಕವಲ್ಲವೆಂದೂ ಡಾ॥ ಕೆ. ಕೃ
ಮೂರ್ತಿಗಳ ಸ್ಪಷ್ಟವಾದ ನಿಲುವು. ಇದಕ್ಕೆ ಆಧಾರವೇನೆಂದರೆ, ಮಾರ್ಗಕಾರ
ರಸಗಳ ಹೆಸರನ್ನು ಹೇಳುವಾಗ 'ಕರುಣಾ' ಎಂದು ದೀರ್ಘೋಚ್ಚರಣೆ ಮಾಡಿರುವು
ಆಗಿದೆ.

ಇದಕ್ಕೆ ನಮ್ಮ ಪ್ರತಿಕ್ರಿಯೆ ಹೀಗೆ—'ಕರುಣಾ'ರಸಕ್ಕೆ ದಯೆ ಸ್ಥಾಯಿಯೆಂ
ಯಾರು ಹೇಳಿದ್ದಾರೆ? ಇದುವರೆಗೆ ಒಬ್ಬ ಕನ್ನಡ ಲಾಕ್ಷಣಿಕನಾಗಲಿ, ಸಂಸ್ಕೃತ ಲಾಕ್ಷ
ನಾಗಲಿ ದಯೆ ಸ್ಥಾಯಿಯೆಂದು ಹೇಳಿಲ್ಲ. ಇದಕ್ಕೆ ವಿರುದ್ಧವಾಗಿ ನಾಗವರ್ಮ
ಕಾವ್ಯಾವಲೋಕನದಲ್ಲಿ 'ಪ್ರಕಟತರ ಶೋಕಭಾವ ಪ್ರಕೃತಿಪರಂ' ಎಂದು 'ಕರುಣ
ರಸಕ್ಕೆ ಶೋಕವೇ ಸ್ಥಾಯಿಯೆಂದು ಹೇಳಿದ್ದಾನೆ. ಅವನು 'ಕರುಣಾರಸ', 'ಕರು
ರಸ' ಎಂಬ ಶಬ್ದಗಳನ್ನೂ ಸಮಾನವಾಗಿ ಪ್ರಯೋಗಿಸಿದ್ದಾನೆ (ಸೂ. ೨೦೬, ಸ
೨೦). ವಾಗ್ಭಟನು 'ಕರುಣಾರಸ' 'ಕರುಣರಸ' ಎಂದು ಎರಡು ಶಬ್ದಗಳನ್ನೂ ಬಳ
ಶೋಕವು ಸ್ಥಾಯಿಯೆಂದು ಸ್ಪಷ್ಟವಾಗಿ ತಿಳಿಸಿದ್ದಾನೆ (೫–೬, ೫–೪).

ಶೋಕ, ದಯೆ–ಇವು ವಿಭಿನ್ನಚಿತ್ತವೃತ್ತಿಗಳಾದರೂ ನಿಕಟವಾದ ಸಂಬಂ
ಇವುಗಳಿಗುಂಟು. ಶೋಕದಿಂದ ದಯೆ, ದಯೆಯ ಹಿಂದೆ ಶೋಕ–ಇರತಕ್ಕವ
ಆದ್ದರಿಂದ 'ಕರುಣಾ' (ದಯೆ) ಉಳ್ಳದ್ದು ಕರುಣ ಎಂದು ಶಬ್ದದ ವ್ಯುತ್ಪತ್ತಿ
ಹಾಗಾದರೆ ದಯೆ ಏಕೆ ಸ್ಥಾಯಿಯಲ್ಲವೆಂದರೆ. ಆಶ್ರಯವಾದ ವ್ಯಕ್ತಿಯಲ್ಲಿ ದ
ಅಭಿವ್ಯಕ್ತವಾಗದೆ ಶೋಕವೇ ಅಭಿವ್ಯಕ್ತವಾಗುವುದರಿಂದ. ಮಾರ್ಗಕಾರನ ಉದಾಹರ
ಯಲ್ಲಿ ವಿರಹಾರ್ತಳಾದ ನಾಯಿಕೆಯ ಶೋಕ ತೋರುವುದೇ ಹೊರತು ದಯೆಯ
'ಕರುಣಿಸು' ಎಂದು ಹೇಳಿದ ಮಾತ್ರದಿಂದ ಕಾರುಣ್ಯ ತೋರುವುದಿಲ್ಲ. ನಾಯಕನ
ಕಾರುಣ್ಯ ಹುಟ್ಟಿತೆಂಬುದಕ್ಕೆ ದಾಖಲೆ ಏನು? 'ಕರುಣಿಸು' ಎಂದು ಹೇಳಿದ್ದರಿಂ
ನಾಯಿಕೆಯ ಶೋಕ ಇನ್ನೂ ಉದ್ದೀಪ್ತವಾಗಿ ಪ್ರತೀತವಾಗುತ್ತದೆ. ಆದ್ದರಿಂದ ಇ
'ಕರುಣವಿಪ್ರಲಂಭ' ಎಂದು ನವೀನರ ಹೇಳಿಕೆ. ಶೋಕವು ಮರಣಜನ್ಯವಾ
ಬೇಕೆಂಬುದು ಮುಂದಿನ ಲಾಕ್ಷಣಿಕರ ವಿಭಾಗವೇ ಹೊರತು, ಪ್ರಾಚೀನ ಲಾಕ್ಷಣಿಕ
ಹೇಳಿದ್ದಲ್ಲ. ಮಾರ್ಗಕಾರನ ಉದಾಹರಣೆಯಲ್ಲಿ ವಿರಹಾರ್ತೆಯ ಶೋಕವೇ ಸ್ಥಾಯಿ
'ಕರುಣಿಸು' ಎಂಬ ನುಡಿ ಶೋಕಕ್ಕೆ ಉದ್ದೀಪನ.

ಮಾರ್ಗಕಾರನ ಮತದಲ್ಲಿ 'ಕರುಣಾ' ರಸಕ್ಕೆ ದಯೆ ಸ್ಥಾಯಿಯಾದರೆ. ಶೋಕ
ಸ್ಥಾಯಿಯಾದಾಗ ಯಾವ ರಸ? ಅಥವಾ ರಸವೇ ಆಗುವುದಿಲ್ಲವೊ? ಆಗುವುದಿ
ವೆಂದರೆ ಸಮಸ್ತ ಲಾಕ್ಷಣಿಕರಿಗೂ ವಿರುದ್ಧವಾಗುತ್ತದೆ. ಪ್ರಾಚೀನರು 'ಕರುಣಾ
ಕರುಣ' ಎಂದು ಎರಡು ಶಬ್ದಗಳನ್ನೂ ಬಳಸಿದ್ದಾರೆ. ದೀರ್ಘಾಂತವಾಗಿ ಗ್ರಂ
ಕಾರನು ಹೇಳಿದ ಮಾತ್ರದಿಂದ ಇಷ್ಟು ದೂರದ ಕಲ್ಪನೆ ಮಾಡುವುದು ನಿರಾಧಾ
ವಾದದ್ದು. (ವಿವರಗಳಿಗೆ ಈ ಸಮೀಕ್ಷಕನ ಲೇಖನವನ್ನು ನೋಡಿ. ಕನ್ನಡ ನು
ಮೇ ೧, ೧೯೭೪),

**೩೯. ಪುಣತಾರಿ-ನಿಟಲ-ಮುಕ್ತಾಮಣಿಗಣಮುತ್ತಂಗದಿಂ ಕಟಿಲ್ದುದುಱ್ ಸಭಾಂ।**
**ಗಣಮೊಪ್ಪೆ ವೀರನಾರಾಯಣನಾ ತಾರಕಿತ-ನಭದವೋಲ್ ಸೊಗಯಿಸುಗುಂ॥**
**(ಪ. ೧೪೧-ಪು. 149)**

ಈ ಪದ್ಯದ 'ನಿಟಿಲ' ಸ್ಥಾನದಲ್ಲಿ ತೃಟಿತ, ತ್ರುಟಿತ–ಎಂಬ ಎರಡು ಪಾಠಗಳುಂಟು. 'ತೃಟಿತ' ಅಶುದ್ಧ. 'ತ್ರುಟಿತ' ಎಂದರೆ ಛಂದೋಭಂಗ. ಆದ್ದರಿಂದ 'ಘಟಿತ' ಎಂದು ಪ್ರೊ॥ ಎ.ವಿ.ಸೀ.ಯವರು ಸೂಚಿಸಿದ ಪಾಠ. ಇದು ಅರ್ಥಕ್ಕೆ ಹೊಂದದೆಂದು ಡಾ॥ ಕೆ. ಕೃಷ್ಣಮೂರ್ತಿಗಳ ಪರಿಷ್ಕರಣ 'ನಿಟಿಲ' ಎಂದು. ನಮ್ಮ ಪರಿಷ್ಕರಣ 'ಲುಟಿತ' ಎಂದು. ಲುಟಿತ=ಹೊರಳಾಡಿದ, ತೀಡಿದ. ಲುಟಿತವಾದ್ದರಿಂದಲೇ ಮುಕ್ತಾಮಣಿಗಳು ಉದುರಿದುವು–ಎಂದು ಅರ್ಥಪುಷ್ಟಿಯೂ ಈ ಪರಿಷ್ಕರಣದಲ್ಲುಂಟು. ಮೂಲಪಾಠಕ್ಕೆ ಸಮೀಪವೂ ಹೌದು.

**೪೦. [ಮಿಗೆ ಗು]ಣದೊಳ್ ಪರಿಚಿತಮುಂ ದ್ವಿಗುಣಮುದೋರಂತೆ**
**ಮಟ್ಟಮಿರ್ದುದು ಮತ್ತಂ।**
**ವಿಗತ-ವಿಕಾರಕಾರಂ ಸೊಗಯಿಸುಗುಂ ನಿನ್ನ ರೂಪು ಶಾಂತಾಧಾರಂ॥**
**(ಪ. ೧೯೪-ಪು. 155)**

ಇದು ಶಾಂತರಸದ ಉದಾಹರಣೆ.

"ಎರಡು ಜೋಡಿಯಾದ ಹುರಿಯಿಂದ ಬಳಸಲ್ಪಟ್ಟಿದ್ದೂ, ನಿನ್ನ ಶರೀರವು ಮಟ್ಟವಾಗಿದೆ. ಯಾವುದೇ ವಿಕಾರವೂ ಇಲ್ಲದಿದೆ. ಶಾಂತತೆಯಿಂದ ಸೊಗಯಿಸುತ್ತಿದೆ." ಎಂದು ಡಾ॥ ಕೆ. ಕೃಷ್ಣಮೂರ್ತಿಗಳು ಬರೆದಿರುವ ಅರ್ಥ. "(ಇಲ್ಲಿ ಯೋಗಮುದ್ರೆಯಲ್ಲಿರುವ ಶಾಂತನಾದ ಯೋಗಿಯ ವರ್ಣನೆ ಇದೆ. ಮೃಚ್ಛಕಟಿಕ ನಾಟಕದ ಮಂಗಳಶ್ಲೋಕವೊಂದರಲ್ಲಿ ಯೋಗಮುದ್ರೆಯಲ್ಲಿರುವ ಶಿವನ ವರ್ಣನೆ ಮಾಡುವಾಗ "ಪರ್ಯಂಕಗ್ರಂಥಿಬಂಧ ದ್ವಿಗುಣಿತಭುಜಗಾಶ್ಲೇಷಸಂವೀತಜಾನೋಃ" ಎಂದಿದೆ. ಎಂದರೆ ಅಲುಗಾಡದಂತೆ ಎರಡು ಮಂಡಿಗಳನ್ನೂ ಎರಡೆಳೆಯ ಹುರಿಯಿಂದ ಕಟ್ಟಿ ಗಂಟನ್ನು ಹಾಕಿರುವ 'ಪರ್ಯಂಕಬಂಧ'ದ ವರ್ಣನೆಯಿದು. ಇಲ್ಲಿಯೂ ಹಾಗೆಯೇ. 'ಗುಣ' ಎಂದರೆ ಹಗ್ಗ ; ದ್ವಿಗುಣ ಎಂದರೆ ಎರಡೆಳೆ. ಆದರಿಂದ 'ಪರಿಚಿತ' ಎಂದರೆ ಸಮೇತ ಎಂದರ್ಥ ಮಾಡುವುದು ಸಂದರ್ಭೋಚಿತವಾಗಿದೆ. ಇಲ್ಲಿ ಶಾಂತರಸ ಸ್ಪಷ್ಟ. ಮಿಕ್ಕ ಅಪಪಾಠಗಳಲ್ಲಿ ಸಂದರ್ಭೋಚಿತವಾದ ಅರ್ಥ ಸ್ವಾರಸ್ಯ ಇಲ್ಲ)" ಎಂದು ವಿವರಿಸಿದ್ದಾರೆ.

'ಪರಿಚಿತಮುಂ ದ್ವಿಗುಣಂ' ಎಂದರೆ ·ದ್ವಿಗುಣದಿಂದ (ಎರಡೆಳೆಯಿಂದ) ಸಮೇತ' ಎಂಬ ಅರ್ಥ ಹೇಗೆ ಬರುತ್ತದೆ, ಯಾವುದಕ್ಕೆ ಎಲ್ಲಿ ಅನ್ವಯ ಎಂಬುದು ನಮ್ಮ ಊಹೆಗೂ ನಿಲುಕುವುದಿಲ್ಲ. ಮತ್ತು 'ಮಿಗೆ ಗುಣದೊಳ್' ಎಂಬುದಕ್ಕೆ ಎಲ್ಲಿ ಅನ್ವಯ? ಇಲ್ಲಿ ಗುಣವೆಂದರೇನು? ಹಗ್ಗವಾದರೆ ಪುನರುಕ್ತ. ಪ್ರಸಿದ್ಧವಾದ

ಗುಣವಾದರೆ, ಅದು ಯಾವುದು? ಗುಣವಿಶೇಷವನ್ನು ಹೇಳದೆ ಸಾಮಾನ್ಯ ಶಬ್ದವನ್ನು ಬಳಸಿದ್ದು ಅನುಚಿತ.

ಯೋಗಿಯು ಧ್ಯಾನಮಾಡುವಾಗ ಎರಡೆಳೆಯ ಹಗ್ಗದಿಂದ ಕಟ್ಟಿಕೊಳ್ಳುತ್ತಾನೆನ್ನುವುದಕ್ಕೆ ಪ್ರಮಾಣವೇನು? ಏಕೆ ಕಟ್ಟಿಕೊಳ್ಳುತ್ತಾನೆ? ಆಸನಬಂಧ ಸಡಿಲವಾಗದಿರಲೆಂದೆ? ಅಂತಹ ಯೋಗಾಸನ ನಮಗೂ ಸಾಧ್ಯ! ನಮಗೆ ತಿಳಿದಂತೆ ಯಾವ ಯೋಗಗ್ರಂಥದಲ್ಲಾಗಲಿ, ಜೈನಗ್ರಂಥದಲ್ಲಾಗಲಿ ಹಗ್ಗದಿಂದ ತನ್ನನ್ನು ಕಟ್ಟಿಕೊಳ್ಳಬೇಕೆಂದು ಹೇಳಿಲ್ಲ. ಜಿನಸೇನಾಚಾರ್ಯರ ಮಹಾಪುರಾಣದಲ್ಲಿ ಯೋಗಿಗಳ ಆಸನಧ್ಯಾನ ಕ್ರಮಗಳ ವಿಸ್ತಾರವಾದ ವರ್ಣನೆ ಇದೆ (೨೧ನೆಯ ಅಧ್ಯಾಯ). ಅಲ್ಲಿಯೂ ಹಗ್ಗದ ಸುಳಿವಿಲ್ಲ. ಕುಮಾರಸಂಭವದಲ್ಲಿ ಶಿವನ ಧ್ಯಾನಸ್ಥಿತಿಯನ್ನು ವರ್ಣಿಸುವಾಗ 'ಪರ್ಯಂಕಬಂಧಸ್ಥಿರಪೂರ್ವಕಾಯಂ' (3–45) ಎಂದು ಮಹಾಕವಿ ಕಾಳಿದಾಸ ಹೇಳಿದ್ದಾನೆ. ವ್ಯಾಖ್ಯಾನಗಳಲ್ಲಿ ಪರ್ಯಂಕಾಸನದ ವಿವರಣೆ ಇದೆ. ಹಗ್ಗದ ವಿಷಯವನ್ನೇ ಎತ್ತಿಲ್ಲ ವ್ಯಾಖ್ಯಾನಕಾರರು. ಸರ್ಪವನ್ನು ಜಟೆಗೆ ಸುತ್ತಿಕೊಂಡಿದ್ದನೆಂದು ಮುಂದಿನ ಶ್ಲೋಕದಲ್ಲಿ ಕಾಳಿದಾಸನೇ ಹೇಳಿದ್ದಾನೆ (ಭುಜಂಗಮೋನ್ನದ್ಧಜಟಾಕಲಾಪಂ). ಮೃಚ್ಛಕಟಿಕದಲ್ಲಿ ಸರ್ಪವನ್ನು ಸುತ್ತಿಕೊಂಡಂತೆ ವರ್ಣಿಸಿದ್ದು ಬರಿಯ ಚಮತ್ಕಾರಕ್ಕಾಗಿ. ಹಾವನ್ನು ಜಗ್ಗಿ ಎಳೆದು ಬಿಗಿದುಕಟ್ಟಿದ್ದರಿಂದ ಅದರ ದೇಹ ದ್ವಿಗುಣಿತ–ದುಪ್ಪಟ್ಟು ನೀಳವಾಯಿತೆಂಬ ಅರ್ಥವೇ ಸ್ವರಸವೂ ಚಮತ್ಕಾರಿಯೂ ಆಗಿದೆ. ಎರಡು ಸುತ್ತು ಎಂದು ಅರ್ಥವಲ್ಲ. ಧ್ಯಾನಕ್ಕೆ ತೊಂದರೆ ಕೊಟ್ಟೀತೆಂಬ ಕಾರಣದಿಂದ ಸರ್ಪವನ್ನು ಬಿಗಿದು ಕಟ್ಟಿದ್ದನೆಂದು ಕವಿಯ ಆಶಯ. ಇದೇ ಕಾರಣದಿಂದಲೇ ಸರ್ಪವನ್ನು ಜಟೆಗೆ ಕಟ್ಟಿದ್ದನೆಂದು ಕಾಳಿದಾಸ ಹೇಳಿರುವುದು. ಪರ್ಯಂಕಬಂಧಕ್ಕೂ ಹಗ್ಗವನ್ನು ಕಟ್ಟಿಕೊಳ್ಳುವುದಕ್ಕೂ ಯಾವ ಸಂಬಂಧವೂ ಇಲ್ಲ,

'ಮಿಗೆ ಗುಣದೊಳ್' ಎಂಬುದರ ಸ್ಥಾನದಲ್ಲಿ 'ಮೃಗಗಣದೊಳ್' ಎಂದು ಪಾಠಾಂತರವಿದೆ. ಅದೇ ಸರಿಯೆಂದು ನಮ್ಮ ಅಭಿಪ್ರಾಯ. 'ದ್ವಿಗುಣಂ' ಕ್ರಿಯಾವಿಶೇಷಣ. ಎರಡರಷ್ಟು—ವಿಶೇಷವಾಗಿ ಎಂದರ್ಥ. ತಪಸ್ವಿಯ ಬಳಿ ಮೃಗಗಳು ನಿರ್ಭೀತಿಯಿಂದ ಸಂಚರಿಸುತ್ತವೆಂಬ ವರ್ಣನೆ ಸುಪ್ರಸಿದ್ಧ. ನಿನ್ನ ರೂಪು ಮೃಗಗಳಿಗೆ ವಿಶೇಷವಾಗಿ ಪರಿಚಿತವಾಗಿದೆ—ಅವು ನಿರ್ಭಯದಿಂದ ಸಮೀಪದಲ್ಲಿ ಸುಳಿದಾಡುತ್ತವೆ —ಎಂಬ ಅರ್ಥದಲ್ಲಿ ಯಾವ ಅನೌಚಿತ್ಯ ಉಂಟು? ಬಾಧಕ ಉಂಟು? ಈ ಅರ್ಥ ಶಾಂತಕ್ಕೆ ಪರಿಪೋಷಕವಾಗಿದೆ.

ನಮ್ಮ ಸಮೀಕ್ಷೆ ದೀರ್ಘವೇ ಆಯಿತು. ಕವಿರಾಜಮಾರ್ಗವನ್ನು ಕ್ರಮವರಿತು ವ್ಯಾಸಂಗಮಾಡತಕ್ಕವರಿಗೆ ಇದರಿಂದ ಪ್ರಯೋಜನವಾದೀತೆಂಬ ನಂಬಿಕೆಯೇ ಇದಕ್ಕೆ ಪ್ರೇರಣೆ. 95ನೇ ಪುಟದ 17ನೇ ಪದ್ಯದ ಅರ್ಥದಲ್ಲಿ 'ಅವಯುವಿಯಾದ ಹುಬ್ಬನ್ನು'

ಎಂದಿದೆ. 'ಅಪಯುವವಾದ ಮುಬ್ಬನ್ನು' ಎಂದಿರಬೇಕಾಗಿತ್ತು. ಈ ಬಗೆಯ ಸಣ್ಣಪುಟ್ಟ ದೋಷಗಳೂ ಇವೆ. ಮುದ್ರಣದೋಷವೂ ಅಲ್ಲಲ್ಲಿ ಇದೆ. ಅದೇ ಪುಟದಲ್ಲಿ 'ರೂಪಣಾಶ್ರಯಾತ್' ಎಂಬುದು 'ರೂಪಣಾರೂಪಣಾಶ್ರಯಾತ್' ಎಂದಿರಬೇಕಾಗಿತ್ತು. 20ನೇ ಪುಟದ ೭೯ನೆಯ ಪದ್ಯದಲ್ಲಿ 'ಅಜೀಯಂದವಂ ಮುನಿಗುಂ' ಇದರ ಅರ್ಥ ಬಿಟ್ಟುಹೋಗಿದೆ.

ಪ್ರಫುಲ್ಲಾಮೋದಿಕುಸುಮಾ 'ಗುಲಾಬೀ' ಸಂಜ್ಞಿತಾ ಲತಾ ।
ಕಂಟಕೈರನುವಿದ್ಧಾಪಿ ಹರತ್ಯೇವ ಸತಾಂ ಮನಃ ॥

---



ಪ್ರತಿಷ್ಠಾನದ ಪ್ರಕಟನೆಗಳನ್ನು ಬಿಡುಗಡೆ ಮಾಡುತ್ತಿರುವ ಡಾ॥ ಜೀವರಾಜ ಆಳ್ವ, ಡಾ॥ ಮಾಸ್ತಿ, ಶ್ರೀ ನಿಟ್ಟೂರು ಶ್ರೀನಿವಾಸರಾವ್




ಸಮಾರಂಭದ ಉದ್ಘಾಟನೆ ಮಾಡುತ್ತಿರುವ ಶ್ರೀ ಎಂ. ಚಂದ್ರಶೇಖರ್ ಮತ್ತು ಡಾ॥ ಪು. ತಿ. ನರಸಿಂಹಾಚಾರ್, ಶ್ರೀ ನಿಟ್ಟೂರು ಶ್ರೀನಿವಾಸ ರಾವ್, ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮೀಜಿ, ಡಾ॥ ಮಾಸ್ತಿ ವೆಂಕಟೇಶ ಅಯ್ಯಂಗಾರ್, ಶ್ರೀ ಜಿ. ನಾರಾಯಣ, ಪ್ರೊ॥ ಎಂ. ವಿ. ಸೀತಾರಾಮಯ್ಯ, ಶ್ರೀ ಎನ್. ಎಸ್. ಸುಬ್ಬಕೃಷ್ಣ.

# ಬಿ. ಎಂ. ಶ್ರೀ. ಜನ್ಮಶತಮಾನೋತ್ಸವ

"ಕನ್ನಡ ಸಾಹಿತ್ಯ ಸರ್ವೋದಯಕ್ಕೆ ನಾಂದೀಸ್ವರೂಪರಾದವರು, ಕನ್ನಡದ ಬಾವುಟವನ್ನು ತೋಳು ನೀಡಿ ನಭಕ್ಕೆತ್ತಿದವರು, ಕನ್ನಡದ ಏಳ್ಗೆಗಾಗಿ ಕನ್ನಡದ ಬಾಳ್ವೆಗಾಗಿ ನಾನಾ ರಂಗಗಳಲ್ಲಿ ಅನೇಕ ವಿಧಾನಗಳಲ್ಲಿ ಉಸಿರು ಕಟ್ಟಿ ಒಮ್ಮನಸ್ಸಿನಿಂದ ಹೋರಾಡಿದವರು, ಕನ್ನಡಮ್ಮನಿಗಾಗಿ ಬಹಿರಂಗವಾಗಿಯೂ, ಅಂತರಂಗವಾಗಿಯೂ ಅನೇಕ ತ್ಯಾಗಗಳನ್ನು ಮಾಡಿದ" ಆಚಾರ್ಯ ಬಿ. ಎಂ. ಶ್ರೀಕಂಠಯ್ಯನವರ ಜನ್ಮ ಶತ ಮಾನೋತ್ಸವ ಸಮಾರಂಭದ ಉದ್ಘಾಟನೆ 3–1–1984 ಮಂಗಳವಾರದಂದು ಅವರ ಸ್ವಂತ ಸ್ಥಳವಾದ ಬೆಳ್ಳೂರಿನಲ್ಲಿ ವಿಜೃಂಭಣೆಯಿಂದ ನೆರವೇರಿತು. ಸಮಾರಂಭಕ್ಕೆ ವಿದ್ವಾಂಸರೂ ಸಾಹಿತಿಗಳೂ ಬುದ್ಧಿಜೀವಿಗಳೂ. ಬಿ. ಎಂ. ಶ್ರೀಯವರ ಬಂಧುವರ್ಗ ದವರೂ ಬೆಂಗಳೂರಿನಿಂದ ಆರು ಬಸ್ಸುಗಳಲ್ಲಿ ಯಾತ್ರೆ ಮಾಡಿ ಬೆಳ್ಳೂರಿನಲ್ಲಿ ನೆರೆದಿದ್ದರು. ಬೆಳ್ಳೂರಿನಲ್ಲಿ ವಿಶಾಲವಾದ ಮೈದಾನದಲ್ಲಿ ನಿರ್ಮಿತವಾಗಿದ್ದ ಅಲಂಕೃತ ಭವ್ಯ ಬಿ. ಎಂ. ಶ್ರೀ. ಮಂಟಪದಲ್ಲಿ ನಡೆದ ಈ ಅಭೂತಪೂರ್ವ ಅದ್ದೂರಿ ಸಮಾರಂಭ ವನ್ನು ಸುಮಾರು 5–6 ಸಾವಿರ ಜನರು ವೀಕ್ಷಿಸಿದರು.

ಅಂದು ಬೆಳ್ಳೂರಿನಲ್ಲಿ ಎಲ್ಲೆಲ್ಲೂ ಹಸಿರು ತೋರಣ, ಕನ್ನಡ ಬಾವುಟದ ಹಾರಾಟ, ಪುಟ್ಟ ಪುಟ್ಟ ರಸ್ತೆಗಳಲ್ಲಿ ಓಡಾಟದ ಸಡಗರ. ಉತ್ಸವದ ಅಂಗವಾಗಿ ಬೆಳ್ಳೂರಿನ ಎಲ್ಲಾ ಕೇರಿಗಳಲ್ಲೂ ಬಿ.ಎಂ.ಶ್ರೀ. ತಾರುಣ್ಯಾವಸ್ಥೆಯನ್ನು ಬಿಂಬಿಸುವ ವೇಷಧಾರಿ ತರುಣ ಕುಳಿತಿದ್ದ ವಾದ್ಯಮೇಳದೊಂದಿಗೆ ರಥದ ಮೆರವಣಿಗೆ.

ಮೊದಲಿಗೆ ಬಿ. ಎಂ. ಶ್ರೀ. ಅವರ ಮನೆಯಿದ್ದ ಸ್ಥಳದಲ್ಲಿ ಸ್ಮಾರಕ ಭವನಕ್ಕಾಗಿ ನಗರಾಭಿವೃದ್ಧಿ ಸಚಿವರಾದ ಶ್ರೀ ಎಂ. ಚಂದ್ರಶೇಖರ್ ಅವರಿಂದ ಭೂಮಿ ಪೂಜೆ. ಸುಮಾರು ವರ್ಷಗಳ ಹಿಂದೆ ಬಿ. ಎಂ. ಶ್ರೀ. ವಂಶಸ್ಥರಿಂದ ಸ್ಥಳೀಯ ವ್ಯಾಪಾರಿ ಯೊಬ್ಬರು ಈ ನಿವೇಶನ ಕೊಂಡಿದ್ದರು. ಇಂದು ಸ್ಥಳೀಯ ಬಿ. ಎಂ. ಶ್ರೀ. ಜನ್ಮಶತಮಾನೋತ್ಸವ ಸ್ವಾಗತ ಸಮಿತಿಯ ಕೋರಿಕೆ ಮೇರೆಗೆ ನಿವೇಶನವನ್ನು ಬೆಳ್ಳೂರಿನಲ್ಲಿ ಬಿ.ಎಂ.ಶ್ರೀ. ಸ್ಮಾರಕ ಭವನ ನಿರ್ಮಾಣಕ್ಕಾಗಿ ತಾವು ಕೊಂಡಿದ್ದ ಬೆಲೆಗೇ ನೀಡಿದರು.

ಅನಂತರ ಬಿ. ಎಂ. ಶ್ರೀ. ಮಂಟಪದಲ್ಲಿ ಶ್ರೀಮತಿ ಬಿ. ಎನ್. ಶಾರದ ಅವರಿಂದ 'ಏರಿಸಿ, ಹಾರಿಸಿ, ಕನ್ನಡದ ಬಾವುಟ', 'ಕರುಣಾಳು ಬಾ ಬೆಳಕೆ' ಕವನಗಳ ಸುಶ್ರಾವ್ಯ ಗಾಯನದಿಂದ ಸಮಾರಂಭ ಪ್ರಾರಂಭ. ಸ್ಥಳೀಯ ಸ್ವಾಗತ ಸಮಿತಿಯ ಅಧ್ಯಕ್ಷ ಶ್ರೀ ಸಿಂಗಾರಿ ಗೌಡರಿಂದ ಎಲ್ಲರಿಗೂ ಸ್ವಾಗತ. ತರುವಾಯ ಪ್ರತಿಷ್ಠಾನದ ಅಧ್ಯಕ್ಷರಾದ ಶ್ರೀ ನಿಟ್ಟೂರು ಶ್ರೀನಿವಾಸರಾವ್ ಅವರು ಉದ್ಘಾಟನಾ ಸಮಾರಂಭ ವನ್ನು ನೆರವೇರಿಸಲು ಆಗಮಿಸಿದ್ದ ಮಹನೀಯರನ್ನು ಸ್ವಾಗತಿಸುತ್ತಾ "ಯಾರ

ಹೆಸರನ್ನು ಹೊಂದಿದೆಯೋ ಆ ಮಹನೀಯರಿಗೆ ಪ್ರಿಯವಾಗಿದ್ದ ಸಾಹಿತ್ಯ, ಭಾಷಾ ಕ್ಷೇತ್ರಗಳಲ್ಲಿ ಸೇವೆ ಸಲ್ಲಿಸಲು ಹೊರಟಿರುವ ಈ ಸಂಸ್ಥೆ ಸ್ಥಾಪನೆಯಾದ ನಾಲ್ಕು ವರ್ಷ ಗಳಲ್ಲಿ ಅಖಿಲ ಕರ್ನಾಟಕದ ವಿದ್ವದಭಿಮಾನಿಗಳ ಗಮನ ಸೆಳೆಯುವಂಥ ಸಂಸ್ಥೆ ಯಾಗಿದೆ" ಎಂದರು.

ಬಳಿಕ ಸಂಸ್ಥಾಪಕ ಕಾರ್ಯದರ್ಶಿ ಪ್ರೊ॥ ಎಂ. ವಿ. ಸೀತಾರಾಮಯ್ಯನವರು ಪ್ರತಿಷ್ಠಾನದ ಪರವಾಗಿ ಮಾತನಾಡುತ್ತ, ಶ್ರೀಯವರು ತಮ್ಮ ಊರಿನವರು ಎಂಬ ಬೆಳ್ಳೂರು ಜನರ ಸಹಜವಾದ ಅಭಿಮಾನ, ಶ್ರೀ ಆದಿ ಚುಂಚನಗಿರಿಯ ಪೀಠಾಧ್ಯಕ್ಷರ ಅನುಗ್ರಹ ಆಶೀರ್ವಾದಗಳು—ಇವುಗಳಿಂದಾಗಿ 'ಶ್ರೀ' ಜನ್ಮ ಶತಮಾನೋತ್ಸವದ ಉದ್ಘಾಟನಾ ಮಹೋತ್ಸವ ಬೆಳ್ಳೂರಿನಲ್ಲಿ ನಡೆಯುವುದು ಸಾಧ್ಯವಾಯಿತು ಎಂದು ಹೇಳಿ, ಅವರಿಗೆ ಪ್ರತಿಷ್ಠಾನದ ಭಕ್ತಿಪೂರ್ವಕ ಕೃತಜ್ಞತೆಯನ್ನು ಸಮರ್ಪಿಸಿದರು. ಕನ್ನಡ ಸಾಹಿತ್ಯ ಪರಿಷತ್ತಿನ ಮಾಜಿ ಅಧ್ಯಕ್ಷರಾದ ಶ್ರೀ ಜಿ. ನಾರಾಯಣ ಅವರು ಶತಮಾನೋತ್ಸವ ಸಮಿತಿಯ ಕಾರ್ಯಾಧ್ಯಕ್ಷರಾಗಿರಲು ಒಪ್ಪಿಕೊಂಡದ್ದು ಸಂತೋಷದ ವಿಷಯ ಎಂದು ಅವರ ಕಾರ್ಯನಿರ್ವಹಣ ಸಾಮರ್ಥ್ಯವನ್ನು ಪ್ರಶಂಸಿಸಿದರು. ಬೆಳ್ಳೂರಿನಲ್ಲಿ ಕಾರ್ಯಕ್ರಮ ನಡೆಯಲು ಸರ್ವವಿಧಗಳಲ್ಲೂ ಸಹಾಯ ಸಹಕಾರಗಳನ್ನು ನೀಡಲು ಮುಂದೆ ಬಂದ ಬೆಳ್ಳೂರಿನ ಸ್ವಾಗತ ಸಮಿತಿಯ ಸದಸ್ಯರಿಗೂ, ಕಾರ್ಯಕರ್ತ ರಿಗೂ, ಮುಖ್ಯವಾಗಿ ಸಮಿತಿಯ ಅಧ್ಯಕ್ಷರಾದ ಶ್ರೀ ಸಿಂಗಾರಿ ಗೌಡರಿಗೂ ಪ್ರತಿಷ್ಠಾನದ ಕೃತಜ್ಞತೆಯನ್ನು ತಿಳಿಸಿದರು. ಅನಂತರ ಸಂಸ್ಥೆಯ ಉದ್ದೇಶಗಳನ್ನು ವಿವರಿಸಿದರು :

> "ಸಂಸ್ಥೆಯ ಉದ್ದೇಶಗಳು ಬಿ. ಎಂ. ಶ್ರೀ. ಅವರಿಗೆ ಪ್ರಿಯವಾಗಿದ್ದ ಕಾರ್ಯ ಕ್ಷೇತ್ರಗಳಿಗೆ ಅನುಗುಣವಾಗಿವೆ. ಪ್ರಾಚೀನ ಸಾಹಿತ್ಯದ ಸಂಗೋಪನೆ– ಪ್ರಕಟನೆ – ಪ್ರಚಾರ, ಹೊಸ ಸಾಹಿತ್ಯ ಸೃಷ್ಟಿ ಪೂರ್ವ ಪರಂಪರೆಯ ಆಧಾರದ ಮೇಲೆ ಸುಮುಖವಾಗಿ ಬೆಳೆಯಲು ಸಹಾಯವಾಗುವಂಥ ಸಹೃದಯತೆಯಿಂದ ಕೂಡಿದ ವಸ್ತುನಿಷ್ಠ ವಿಮರ್ಶೆಗೆ ತಕ್ಕ ನೆಲೆಯನ್ನು ಕಲ್ಪಿಸುವುದು. ಈ ಉದ್ದೇಶ ಸಾಧನೆಗಾಗಿ ಸಹೃದಯ ಗೋಷ್ಠಿಯ ನಿರ್ವಹಣೆ – ಈ ಎಲ್ಲವೂ ಸಂಶೋಧ ನೆಯ. ಪಾಂಡಿತ್ಯದ, ವಿಚಾರ ವಿಮರ್ಶೆಯ ನೆಲೆಗಟ್ಟಿನ ಮೇಲೆ ನಡೆಯುತ್ತವೆ. ನೃಪತುಂಗನ ಕಾಲದ ಕನ್ನಡಿಗರು ಕುರಿತೋದದೆಯುಂ ಕಾವ್ಯ ಪ್ರಯೋಗ ಪರಿಣತ ಮತಿಗಳಾಗಿದ್ದರು. ಈ ಆಧುನಿಕ ಯುಗದಲ್ಲಿ ಕುರಿತು ಓದದೆ ಹೋದರೆ ಕಾಲಕ್ಕೆ ತಕ್ಕ ಪರಿಣತಮತಿ ಸಿದ್ಧಿಸುವುದಿಲ್ಲ. ಪರಿಣತಮತಿಯ ಬಹುಮುಖ ಸಾಹಿತ್ಯ ಕಾರ್ಯಗಳಿಗೆ ವಿಶಾಲ ವ್ಯಾಪ್ತಿಯ ಅವಕಾಶ ಒದಗಿಸ ಬೇಕು ಎನ್ನುವುದು ಪ್ರತಿಷ್ಠಾನದ ಗುರಿ",

ಎಂದು ವಿವರಿಸಿ, ಹಳೆಯ ಹಸ್ತಪ್ರತಿಗಳ ಪ್ರಕಟನೆಗೆ ಕೇಂದ್ರ ಸರ್ಕಾರ ನೀಡುತ್ತಿರುವ ಉದಾರ ಧನ ಸಹಾಯವನ್ನು ಕೃತಜ್ಞತೆಯಿಂದ ಸ್ಮರಿಸಿದರು. ರಾಜ್ಯ ಸರ್ಕಾರದಿಂದ

ಉದಾರವಾದ ವಾರ್ಷಿಕ ಅನುದಾನ ಬೆಂಗಳೂರಿನಲ್ಲಿ ನಿರ್ಮಾಣ ಮಾಡಬೇಕೆಂದಿರುವ "ಶ್ರೀ ಸ್ಮಾರಕ ಭವನ"ಕ್ಕೆ ಧನ ಸಹಾಯ, ಇತರ ವಿಶೇಷ ಯೋಜನೆಗಳಿಗೆ ಧನ ಸಹಾಯ ನೀಡಿ ಪ್ರತಿಷ್ಠಾನದ ಉದ್ದೇಶಗಳು ಸಫಲವಾಗುವಂತೆ ಉಪಕಾರ ಮಾಡ ಬೇಕೆಂದೂ ನಿವೇದಿಸಿಕೊಂಡರು. ಉಪಸ್ಥಿತರಿದ್ದ ಮಂತ್ರಿ ಮಹೋದಯರಾದ ಶ್ರೀ ಎಂ. ಚಂದ್ರಶೇಖರ್ ಅವರನ್ನು ಉದ್ದೇಶಿಸಿ, ಪ್ರತಿಷ್ಠಾನದ "ಶ್ರೀ ಭವನ" ನಿರ್ಮಾಣ ಕಾರ್ಯಕ್ಕೆ ನಿವೇಶನ ಕೊಡುವುದರ ಮೂಲಕ "ಗುರುವಿನ ಗುರುವಿಗೆ ಗುರುದಕ್ಷಿಣೆ ಸಮರ್ಪಿಸಿ" ಎಂದು ಕೇಳಿಕೊಂಡರು. ಮಹಾಜನರ ಬೆಂಬಲ ಸರ್ಕಾರದ ಸಹಾಯ ಕ್ಕಿಂತ ಮುಖ್ಯವಾದದ್ದು. 'ನಾನು ಕನ್ನಡದ ದಾಸಯ್ಯ, ಭಿಕ್ಷೆ ಬೇಡಲು ಬಂದಿದ್ದೇನೆ' ಎಂಬ 'ಶ್ರೀ' ವಾಣಿಯನ್ನು ಉಚ್ಚರಿಸಿ ತಮ್ಮ ಮಾತನ್ನು ಮುಗಿಸಿದರು.

**'ಶ್ರೀ' ಜನ್ಮ ಶತಮಾನೋತ್ಸವ ರೂಪರೇಷೆ** :—ಉತ್ಸವ ಸಮಿತಿಯ ಕಾರ್ಯಾಧ್ಯಕ್ಷರಾದ ಶ್ರೀ ಜಿ. ನಾರಾಯಣ ಅವರು ತಮ್ಮ ಭಾಷಣದಲ್ಲಿ ಉತ್ಸವಕ್ಕೆ ಆಶೀರ್ವಾದ ಪೂರ್ವಕವಾಗಿ ಬೆಂಬಲ ನೀಡಿದ ಆದಿ ಚುಂಚನಗಿರಿಯ ಶ್ರೀ ಬಾಲ ಗಂಗಾಧರನಾಥ ಸ್ವಾಮಿಗಳವರಿಗೂ, ಉತ್ಸವ ಸಮಿತಿಯ ಅಧ್ಯಕ್ಷರಾದ ಶ್ರೀ ಸಿಂಗಾರಿ ಗೌಡರಿಗೂ ವಂದನೆ ಸಲ್ಲಿಸಿ, ಉತ್ಸವದ ವಿವರಗಳನ್ನು ನಿರೂಪಿಸಿದರು :

"ಬಿ.ಎಂ.ಶ್ರೀಯವರ ವ್ಯಕ್ತಿತ್ವ, ಜೀವನ ಮತ್ತು ಸಾಧನೆಗಳನ್ನು ಕುರಿತು ಕನ್ನಡ ಮತ್ತು ಇಂಗ್ಲಿಷ್‌ನಲ್ಲಿ ವಿದ್ವತ್‌ಪೂರ್ಣವಾದ ಸಂಪುಟಗಳನ್ನು ಪ್ರಕಟಿಸುವುದು, ಹಳಗನ್ನಡದಲ್ಲಿರುವ ಅವರ ನಾಟಕಗಳನ್ನು ಪ್ರಯೋಗಾನುಕೂಲಕ್ಕಾಗಿ ಹೊಸ ಗನ್ನಡಕ್ಕೆ ಅನುವಾದಿಸುವುದು, ಮಕ್ಕಳಿಗೆ ಮತ್ತು ಜನಸಾಮಾನ್ಯರಿಗೆ ತಿಳಿಯುವಂತೆ ಬಿ. ಎಂ. ಶ್ರೀಯವರನ್ನು ಕುರಿತು ಸಣ್ಣ ಸಣ್ಣ ಪುಸ್ತಕಗಳನ್ನು ಪ್ರಕಟಿಸಿ ಸುಲಭ ಬೆಲೆಗೆ ಮಾರಾಟ ಮಾಡುವುದು, ಶ್ರೀಯವರ ನಾಟಕ ಕತೆಗಳು, ಸೂಕ್ತಿಗಳು ಮುಂತಾದುವನ್ನು ಸಂಗ್ರಹಿಸಿ ಪುಸ್ತಕ ರೂಪದಲ್ಲಿ ಅಚ್ಚು ಮಾಡಿಸುವುದು, ಶ್ರೀ ಯವರ ಭಾವಚಿತ್ರಗಳನ್ನು ಪ್ರಕಟಿಸಿ ಮಾರಾಟಕ್ಕೆ ಬಿಡುಗಡೆ ಮಾಡುವುದು ಇತ್ಯಾದಿ ಈ ಅಂಶಗಳು ಯೋಜನೆಯಲ್ಲಿ ಸೇರಿವೆ.

"ಅಲ್ಲದೆ, ನಾಡಿನಲ್ಲಿರುವ ಎಲ್ಲ ವಿಶ್ವವಿದ್ಯಾಲಯಗಳು ಮತ್ತು ಪ್ರಮುಖ ಸಂಘ ಸಂಸ್ಥೆಗಳ ಸಹಕಾರ, ಸಹಯೋಗದೊಂದಿಗೆ ಶ್ರೀಯವರ ಜೀವನ, ಸಾಧನೆ, ಕೃತಿಗಳಿಗೆ ಸಂಬಂಧಪಟ್ಟಂತೆ ವಿಚಾರಗೋಷ್ಠಿಗಳನ್ನು ಕವಿಗೋಷ್ಠಿಗಳನ್ನು ಜಿಲ್ಲಾ ಕೇಂದ್ರಗಳಲ್ಲಿಯೂ, ತಾಲ್ಲೂಕು ಕೇಂದ್ರಗಳಲ್ಲಿಯೂ ನಡೆಸುವುದು. ಕೇಂದ್ರ ಮತ್ತು ರಾಜ್ಯ ಸಾಹಿತ್ಯ ಅಕಾಡೆಮಿಗಳ ಸಹಕಾರದಿಂದ ಪ್ರಮುಖ ನಗರಗಳಲ್ಲಿ ಗೋಷ್ಠಿ ಕಾರ್ಯಕ್ರಮಗಳನ್ನು, ಶ್ರೀಯವರ ನಾಟಕ ಪ್ರದರ್ಶನಗಳನ್ನು ಏರ್ಪಡಿಸುವುದು.

"ಜನ್ಮ ಶತಮಾನೋತ್ಸವ ಅಂಗವಾಗಿ ಸಾಧ್ಯವಾದಮಟ್ಟಿಗೆ ಪ್ರತಿ ಜಿಲ್ಲಾ ಮತ್ತು ತಾಲ್ಲೂಕು ಮಟ್ಟದಲ್ಲಿ ಶ್ರೀಯವರ ಹೆಸರಿನಲ್ಲಿ ಉತ್ಸವ ಕಾರ್ಯಕ್ರಮಗಳನ್ನು,

ಶಾಲಾ ಮಕ್ಕಳಿಗೆ ಪ್ರಬಂಧ ರಚನೆ, ಕವಿತಾ ವಾಚನ ಮುಂತಾದ ಸ್ಪರ್ಧೆಗಳನ್ನು ನಡೆಸುವುದು. ಅಲ್ಲದೇ ಶ್ರೀಯವರ ಚಿತ್ರವಿರುವ ಅಂಚೆ ಚೀಟಿಯನ್ನು ಹೊರತರ ಬೇಕೆಂದು ಕೇಂದ್ರ ಸರ್ಕಾರಕ್ಕೆ ಸಂಬಂಧಪಟ್ಟ ಇಲಾಖೆಯೊಂದಿಗೆ ವ್ಯವಹರಿಸುವುದು. (ಈಗಾಗಲೇ ಪತ್ರ ವ್ಯವಹಾರ ಮಾಡಲಾಗಿದೆ.)

"ಬೆಂಗಳೂರು, ಮೈಸೂರು, ಮಂಗಳೂರು, ಧಾರವಾಡ ಮುಂತಾದ ಪ್ರಮುಖ ನಗರಗಳ ಮುಖ್ಯ ರಸ್ತೆಗೆ ಅಥವಾ ಬಡಾವಣೆಗೆ ಶ್ರೀಯವರ ಹೆಸರಿಡಬೇಕೆಂದು ಸಂಬಂಧಪಟ್ಟ ನಗರ ಸಭೆಗಳಿಗೆ ಪತ್ರ ಬರೆಯಲಾಗಿದೆ.

"ಬಿ.ಎಂ.ಶ್ರೀಯವರ ಜನ್ಮಶತಮಾನೋತ್ಸವದ ಸ್ಮಾರಕವಾಗಿ ಬೆಂಗಳೂರಿನಲ್ಲಿ "ಶ್ರೀ ಭವನ"ವನ್ನು ನಿರ್ಮಿಸಬೇಕೆಂದು ಯೋಜಿಸಲಾಗಿದೆ.

"ಈ ಎಲ್ಲ ಕಾರ್ಯಕ್ರಮಗಳ ಅಂದಾಜು ವೆಚ್ಚ 12 ಲಕ್ಷ ರೂಪಾಯಿಗಳಾಗು ತ್ತದೆ. ಈ ಬಗ್ಗೆ ಒಂದು ಯೋಜನೆಯನ್ನು ತಯಾರಿಸಿ ಆರ್ಥಿಕ ಸಹಾಯಕ್ಕಾಗಿ ರಾಜ್ಯ ಸರ್ಕಾರಕ್ಕೆ ಕಳುಹಿಸಿಕೊಡಲಾಗಿದೆ."

ವರ್ಷ ಪೂರ್ತಿಯ ಕಾರ್ಯಕ್ರಮದ ಸ್ವರೂಪವನ್ನು ತಿಳಿಸಿದ ಮೇಲೆ ಶ್ರೀ ನಾರಾಯಣ ಅವರು ಬೆಳ್ಳೂರಿನ ಪ್ರಥಮ ಕಾರ್ಯಕ್ರಮ ವಿವರಗಳನ್ನು ತಿಳಿಯ ಹೇಳಿ, ಸ್ವಾಗತ ಸಮಿತಿಯವರು ಬೆಳ್ಳೂರಿನಲ್ಲಿ ನಿರ್ಮಿಸಬೇಕೆಂದಿರುವ 'ಶ್ರೀ' ಸ್ಮಾರಕ ಭವನಕ್ಕೆ ಸರ್ಕಾರ ಧನ ಸಹಾಯ ಮಾಡಬೇಕೆಂದು ಕೇಳಿಕೊಂಡರು. ಬೆಳ್ಳೂರಿನಲ್ಲಿ ಹೆಣ್ಣುಮಕ್ಕಳಿಗಾಗಿಯೇ ಬಿ. ಎಂ. ಶ್ರೀ.ಯವರ ಹೆಸರಿನಲ್ಲಿ ಒಂದು ಪ್ರೌಢಶಾಲೆ ಆಗಬೇಕಾದ ಅಗತ್ಯವನ್ನು ಒತ್ತಿ ಹೇಳಿದರು. ಅಂದಿನ ಕಾರ್ಯಕ್ರಮವನ್ನು ಜನತೆಗೆ ಮುಟ್ಟಿಸಲು ಪತ್ರಿಕಾ ಪ್ರತಿನಿಧಿಗಳು, ಬೆಂಗಳೂರು ಆಕಾಶವಾಣಿಯವರು, ದೂರ ದರ್ಶನ ಕೇಂದ್ರದವರು, ಸರ್ಕಾರದ ವಾರ್ತಾ ಇಲಾಖೆಯವರು ತೊಂದರೆ ತೆಗೆದು ಕೊಂಡು ಬಂದಿದ್ದುದಕ್ಕಾಗಿ ಪ್ರತಿಷ್ಠಾನದ ವಂದನೆ ತಿಳಿಸಿದರು. ಎಲ್ಲ ಏರ್ಪಾಡು ಗಳನ್ನೂ ಅಚ್ಚುಕಟ್ಟಾಗಿ ವ್ಯವಸ್ಥೆ ಮಾಡಿದ್ದ ಸ್ವಾಗತ ಸಮಿತಿಯ ಸದಸ್ಯರ, ಕಾರ್ಯ ಕರ್ತರ ಉಪಕಾರವನ್ನು ಸ್ಮರಿಸಿದರು.

ದೀಪ ಬೆಳಗಿಸಿ ಉತ್ಸವವನ್ನು ಉದ್ಘಾಟಿಸಿದ ನಗರಾಭಿವೃದ್ಧಿ ಸಚಿವ ಸನ್ಮಾನ್ಯ ಶ್ರೀ ಎಂ. ಚಂದ್ರಶೇಖರ್ ಅವರು ಬೆಳ್ಳೂರಿನಲ್ಲಿ ಕಟ್ಟಬೇಕೆಂದಿರುವ ಸ್ಮಾರಕ ಭವನಕ್ಕೆ ಧನಸಹಾಯ ನೀಡುವ ಭರವಸೆ ನೀಡಿದರಲ್ಲದೆ ಬೆಂಗಳೂರಿನಲ್ಲಿರುವ ಪ್ರತಿಷ್ಠಾನದ ಕಾರ್ಯಾಲಯಕ್ಕೂ ಉಚಿತ ನಿವೇಶನ ಕೊಡಿಸುವುದಾಗಿ ಆಶ್ವಾಸನೆ ಕೊಟ್ಟರು.

ಕಲಾವಿದ ಶ್ರೀ ಎನ್. ಎಸ್. ಸುಬ್ಬಕೃಷ್ಣ ಅವರು ರಚಿಸಿರುವ ಆಳೆತ್ತರದ ಬಿ.ಎಂ.ಶ್ರೀ. ವರ್ಣಚಿತ್ರವನ್ನು ಅನಾವರಣ ಮಾಡಿದ ಆದಿಚುಂಚನಗಿರಿ ಮಠಾಧ್ಯಕ್ಷ ರಾದ ಶ್ರೀ ಶ್ರೀ ಬಾಲಗಂಗಾಧರನಾಥ ಸ್ವಾಮೀಜಿಯವರು ಕನ್ನಡತನವನ್ನೂ

ಸ್ವಾಭಿಮಾನವನ್ನೂ ಉಳಿಸಿಕೊಳ್ಳಬೇಕು ಎಂದು ಹೇಳಿ, ಉತ್ಸವ ಯಶಸ್ವಿಯಾಗಿ ನಡೆಯಲಿ ಎಂದು ಆಶೀರ್ವದಿಸಿದರು. ಪುಸ್ತಕ ಪ್ರದರ್ಶನದ ಉದ್ಘಾಟನೆಯನ್ನು ಶಾಸಕ ಶ್ರೀ ಚಿಗರಿಗೌಡರು ನೆರವೇರಿಸಿದರು. ಸಮಾರಂಭದ ಅಂಗವಾಗಿ ಪ್ರತಿಷ್ಠಾನ ಪ್ರಕಟಿಸಿದ್ದ 'ಕನ್ನಡ ಕಣ್ವ ಬಿ.ಎಂ.ಶ್ರೀ' (ಶ್ರೀ ಹೋ. ಶ್ರೀನಿವಾಸಯ್ಯ), 'ಆಚಾರ್ಯ ಬಿ. ಎಂ. ಶ್ರೀ' (ಪ್ರೊ॥ ಎಲ್. ಎಸ್. ಶೇಷಗಿರಿರಾವ್) 'ಶ್ರೀ ವಾಣಿ' (ಸಂ. ಡಾ॥ ಹಾ. ಮಾ. ನಾಯಕ)—ಈ ಮೂರು ಪುಸ್ತಕಗಳನ್ನು ಮಾಜಿ ವಿದ್ಯಾ ಸಚಿವ ಶ್ರೀ ಕೆ. ಪಿ. ಶಂಕರಗೌಡರು ಬಿಡುಗಡೆ ಮಾಡಿದರು.

ಯಾವ ಪ್ರತಿಫಲವನ್ನೂ ಬಯಸದೆ ಶ್ರೀಯವರ ಮೇಲಿನ ಅಭಿಮಾನದಿಂದ ಅವರ ಭಾವಚಿತ್ರವನ್ನು ರಚಿಸಿ ಕೊಟ್ಟ ಕಲಾವಿದ ಶ್ರೀ ಸುಬ್ಬಕೃಷ್ಣ ಅವರನ್ನೂ ಅವರ ಪತ್ನಿಯನ್ನೂ ಸನ್ಮಾನಿಸಲಾಯಿತು.

ಅಧ್ಯಕ್ಷತೆ ವಹಿಸಿದ್ದ ಡಾ॥ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು 'ಶ್ರೀ' ಯವರ ಬಗೆಗೆ ಮಾತನಾಡುತ್ತಾ, ಆಚಾರ್ಯ 'ಶ್ರೀ' ಅವರು ಹಾಕಿಕೊಟ್ಟಿರುವ ಮಾರ್ಗದಲ್ಲಿ ಕನ್ನಡದ ಹಿರಿಯ ಸಂಪ್ರದಾಯವನ್ನು ಪಾಲಿಸಿಕೊಂಡು ಬರಬೇಕೆಂದು ಕನ್ನಡಿಗರಿಗೆ ಕರೆ ನೀಡಿದರು. ತಮ್ಮ ಗುರುಗಳನ್ನು ಅತ್ಯಂತ ಭಕ್ತಿಪೂರ್ವಕವಾಗಿ ನೆನೆದ ಮಾಸ್ತಿಯವರು ಬಿ. ಎಂ. ಶ್ರೀ. ಕನ್ನಡಕ್ಕಾಗಿ ಪಟ್ಟ ಶ್ರಮ, ಅನುಭವಿಸಿದ ಕಷ್ಟ ಪರಂಪರೆ, ಇವುಗಳ ನಡುವೆಯೂ ಮಾಡಿದ ಕನ್ನಡ ನಾಡು ನುಡಿಗಳ ಸೇವೆಯನ್ನು ಭಾವುಕತೆಯಿಂದ ವಿವರಿಸಿದರು. ಕನ್ನಡವನ್ನು ಆಕಾಶಕ್ಕೇರಿಸಿದ 'ಶ್ರೀ' ಯವರು ತಾವು 'ಪಾತಾಳ ಕಂಡರು' ಎಂದು ಅವರು ಅತ್ಯಂತ ಖಿನ್ನರಾಗಿ ನುಡಿದರು. 'ನಮ್ಮ ಮೇಷ್ಟ್ರು ಪ್ರಿನ್ಸಿಪಾಲರಾಗಲಿಲ್ಲ, ವೈಸ್‌ಚಾನ್ಸಲರಾಗಲಿಲ್ಲ' ಎಂದು ದುಃಖಿಸಿದರು. 'ಶ್ರೀಯವರು ಸಾಹಿತ್ಯ ಸೃಷ್ಟಿಸಿದರಲ್ಲದೆ ಸಾಹಿತ್ಯ ಸೃಷ್ಟಿಸಬಲ್ಲ ಅನೇಕ ಗಟ್ಟಿಗರನ್ನೂ ಸೃಷ್ಟಿಸಿದರು' ಎಂದು ಹೆಮ್ಮೆಯಿಂದ ಹೇಳಿದರು. ಶ್ರೀ ಎಂ. ವಿ. ಸತ್ಯನಾರಾಯಣ ಅವರು ಸಂದೇಶ ಓದಿದರು. ಶ್ರೀ ಆರ್. ಎಚ್. ರಾಜು ಅವರು ಕಾರ್ಯಕ್ರಮ ನಿರ್ವಹಿಸಿದರು. ಶ್ರೀ ಜಿ. ಕೆ. ಗುಂಡೂರಾವ್ ಅವರ ವಂದನಾರ್ಪಣೆಯೊಂದಿಗೆ ಬೆಳಗಿನ ಕಾರ್ಯಕ್ರಮ ಸಮಾಪ್ತವಾಯಿತು.

ಅಂದಿನ ದಿನ ಮಧ್ಯಾಹ್ನ ಡಾ॥ ರಂ. ಶ್ರೀ. ಮುಗಳಿಯವರ ಅಧ್ಯಕ್ಷತೆಯಲ್ಲಿ 'ಬಿ. ಎಂ. ಶ್ರೀ ಜೀವನ–ಸಾಧನೆ' ಕುರಿತು ವಿಚಾರಗೋಷ್ಠಿ ನಡೆಯಿತು. ಡಾ॥ ಸಿದ್ದಯ್ಯ ಪುರಾಣಿಕ ಅವರು 'ಶ್ರೀಯವರ ಅಖಂಡ ಕರ್ನಾಟಕ ದೃಷ್ಟಿ' ಎಂಬ ವಿಷಯವಾಗಿ, ಶ್ರೀ ಎಚ್. ಎಲ್. ನಾಗೇಗೌಡರು 'ಆಚಾರ್ಯ ಬಿ. ಎಂ. ಶ್ರೀ.' ಎಂಬ ವಿಷಯವಾಗಿ, ಶ್ರೀಮತಿ ಚಿ. ನ. ಮಂಗಳ ಅವರು 'ಶ್ರೀ ಸಾಹಿತ್ಯ' ಕುರಿತು ಮಾತನಾಡಿದರು.

ಸಂಜೆ ಡಾ॥ ಪು. ತಿ. ನರಸಿಂಹಾಚಾರ್ ಅವರ ಅಧ್ಯಕ್ಷತೆಯಲ್ಲಿ ನಡೆದ ಕವಿಗೋಷ್ಠಿಯಲ್ಲಿ ಸರ್ವಶ್ರೀ ಡಾ॥ ಜಿ. ಎಸ್. ಶಿವರುದ್ರಪ್ಪ, ಡಾ॥ ರಾಮಚಂದ್ರಶರ್ಮ, ಹಿ. ಮ. ನಾಗಯ್ಯ, ಕೆ. ಎಸ್. ನಿಸಾರ್ ಅಹಮದ್, ಸುಮತೀಂದ್ರ ನಾಡಿಗ, ಎಚ್. ಎಸ್. ವೆಂಕಟೇಶ ಮೂರ್ತಿ, ಬಿ. ಆರ್. ಲಕ್ಷ್ಮಣರಾವ್, ಡಿ. ಆರ್. ರಾಮಯ್ಯ, ಸುಬ್ರಹ್ಮಣ್ಯ ಅಡಿಗ, ಬಿ. ಎಸ್. ಅನಂತಸ್ವಾಮಿ ರಾವ್, ಎಂ. ವಿ. ಸೀತಾರಾಮಯ್ಯ ಇವರುಗಳು ಭಾಗವಹಿಸಿದ್ದರು. ಶ್ರೀ ನರಹಳ್ಳಿ ಬಾಲಸುಬ್ರಹ್ಮಣ್ಯ ಅವರು ಕಾರ್ಯಕ್ರಮಗಳ ನಿರ್ವಾಹಕರಾಗಿದ್ದರು.

ಕವಿಗೋಷ್ಠಿಯಾದ ಮೇಲೆ, ಸಾಂಸ್ಕೃತಿಕ ಕಾರ್ಯಕ್ರಮದ ಅಂಗವಾಗಿ ಬೆಂಗಳೂರು ಬಿ. ಇ. ಎಲ್. ಕಾರ್ಖಾನೆಯ ಲಲಿತಕಲಾ ಸಂಘದವರು 'ಶ್ರೀ' ಅವರ 'ಗದಾಯುದ್ಧ ನಾಟಕ'ವನ್ನು ಅಭಿನಯಿಸಿ ಜನ ಸಮೂಹವನ್ನು ತಣಿಸಿದರು. (ನಿರ್ದೇಶನ : ಶ್ರೀ ಉಪಾಸನೆ ಸೀತಾರಾಮ್) ಅನಂತರ ಬೆಳ್ಳೂರಿನವರೇ ಆದ ಶ್ರೀ ಎಚ್. ಟಿ. ಕೃಷ್ಣಪ್ಪನವರು 'ಗೀತೋಪದೇಶ' ರೂಪಕವನ್ನು ಪ್ರದರ್ಶಿಸಿ ಸಂತೋಷಪಡಿಸಿದರು. ಇಲ್ಲಿ ದಿನಪೂರ್ತಿಯ ಉತ್ಸವ ಕಣ್ಮನಗಳಿಗೆ ರಸದೌತಣ ನೀಡಿ ಯಶಸ್ವಿಯಾಗಿ ಮುಗಿಯಿತು.

---

# ವಸ್ತು ಸಂಗ್ರಹ

## ವಿಲ್ಲಿ ಭಾರತದ ಮೂಲವೆಲ್ಲಿ ?

ವಿಜ್ಞಾಪನೆಗಳು

ತಮಿಳಿನಲ್ಲಿ ಭಾರತವನ್ನು ಬರೆದ ವಿಲ್ಲಿ ಅಥವಾ ವಿಲ್ಲಿಪುತ್ತೂರರ್ ಕವಿ ಆದಾವುದೋ ವ್ಯಾಸಭಾರತ ಭಿನ್ನವಾದ ಭಾರತಕ್ಕೆ ಋಣಿಯಾಗಿದ್ದನೆಂದು ತೋರುತ್ತದೆ. ಅದೇ ಪ್ರಕಾರ ಹಿಂದಣ ಪಂಪಕವಿಯೂ ಇರಬಹುದು. ತಮಿಳು ವಿದ್ವಾಂಸರೊಳಗೆ ಗಣ್ಯರಾದ ಶ್ರೀ ಎಂ. ಎಸ್. ಪೂರ್ಣಲಿಂಗಪಿಳ್ಳೆಯವರು ತಮ್ಮ Tamil Literature (ತಮಿಳು ಸಾಹಿತ್ಯ) ಎಂಬ ಗ್ರಂಥದಲ್ಲಿ ವಿಲ್ಲಿ ಕವಿಯ ಭಾರತವನ್ನು ಕುರಿತು ಬರೆಯುತ್ತಾ ಒಂದೆಡೆ ಹೀಗೆಂದಿರುವರು : "For its wealth of legends and stories, it was indebted to the Sanskrit ACCRETIONAL epic of Mahabharatha" (page 279). ಮತ್ತೊಂದೆಡೆಯಲ್ಲಿ ಅವರು ಹೇಳುವುದೇನೆಂದರೆ–"The epic was based on the Bharatham of Vyasa and Bala Bharatham in Sanskrit and on that of Perum Thevanar in Tamil" (page 281). ಅವರು ಹೇಳುವ ಬಾಲಭಾರತವೆಂದರೆ ಯಾವುದು? ಸಾಮಾನ್ಯ ಪತ್ತನೆಯ ಶತಮಾನ ಅಥವಾ ಅದಕ್ಕೆ ಹಿಂದಣವನಾದ ಅಮರಚಂದ್ರಸೂರಿ ಕೃತವಾದ ಬಾಲಭಾರತವೆಂಬುದೊಂದುಂಟು. ಅಮರಚಂದ್ರಸೂರಿ ಜೈನನೆಂದು ತೋರುತ್ತದೆ. ಆ ಬಾಲಭಾರತವು ಅಚ್ಚಾಗಿದೆಯೋ, ಆಗಿದ್ದರೆ ಎಲ್ಲಿ ದೊರೆಯುವುದು ? ಎನ್ನುವ ವಿಚಾರವನ್ನು ಬಲ್ಲವರಾರಾದರೂ ತಿಳಿಸಿದರೆ ಉಪಕಾರವಾಗುತ್ತಿತ್ತು. ಒಂದು ವೇಳೆ ಆ ಗ್ರಂಥವು ಈಗ ದೊರೆಯುತ್ತಿಲ್ಲವಾದರೆ, ಅದನ್ನು ನೋಡುವುದಕ್ಕೆ ಅನುಕೂಲವಿರತಕ್ಕ ವಿದ್ವಾಂಸರಾರಾದರೂ ಅದರೊಳಗಿನ ಉದ್ಯೋಗಪರ್ವದಲ್ಲಿ ಕರ್ಣನಿಗೆ ಕುಂತಿ ಅಥವಾ ಕೃಷ್ಣನೊಡನೆ ಉಂಟಾದ ಸಂಭಾಷಣೆಯ ಸಂದರ್ಭದಲ್ಲಿ 'ನೆತ್ತವನಾಡಿದ' ಪ್ರಸ್ತಾಪವು ಬರುವುದೇ ? ಎನ್ನುವ ವಿಷಯವನ್ನು ತಿಳಿಸುವ ಕೃಪೆ ಮಾಡಬೇಕು.

—ಎನ್. ಬಿ.

(ಆಧಾರ: ಕನ್ನಡ ನುಡಿ, 5 ಜನವರಿ 1940)

## ಹಳೆಯ ಹಸ್ತಪ್ರತಿಗಳ ರಕ್ಷಣೆ

ಹಳೆಯ ಹಸ್ತಪ್ರತಿಗಳು ಮತ್ತು ಪೆಯಿಂಟಿಂಗ್‌ಗಳ ನಾಶಕ್ಕೆ ಕಾರಣವಾದ ಕೆಲವು ಅಣುಜೀವಿಗಳನ್ನು ಪತ್ತೆಮಾಡಲಾಗಿದೆ. ಇದರಿಂದಾಗಿ ಇವನ್ನು ಬಹಳ ಕಾಲ ರಕ್ಷಿಸಿಡುವ ಕ್ರಮಕ್ಕೆ ಹೊಸ ತಿರುವು ಬಂದಂತಾಗಿದೆ. ಲಕ್ನೋದ ಸಾಂಸ್ಕೃತಿಕ ದಾಖಲೆಗಳನ್ನು ಸಂರಕ್ಷಿಸಿಡುವ ರಾಷ್ಟ್ರೀಯ ಸಂಶೋಧನಾ ಸಂಸ್ಥೆಯಲ್ಲಿ ಈ ಅಣುಜೀವಿ

ಗಳನ್ನು ಪತ್ತೆಮಾಡಲಾಗಿದೆ. ಆಸ್ಪರ್ ಗಿಲಸ್, ಪೆನ್ಸಿಲಮ್ ಅಲ್ಪನೇರಿಯಾ, ಕ್ಲಾಡೋಸ್ಪೋರಾ ಮತ್ತು ಫ್ಯುಸೇರಿಯಂಗಳೇ ಈ ನಾಲ್ಕು ಅಣುಜೀವಿಗಳು.

ಅಣುಜೀವಿ ನಿರೋಧಕ ದ್ರಾವಣಗಳನ್ನು ಆಗಾಗ್ಗೆ ಸಿಂಪಡಿಸುವುದರಿಂದ ಈ ಅಣುಜೀವಿಗಳ ದಾಳಿಯನ್ನು ತಡೆದು ದಾಖಲೆಗಳನ್ನು ಬಹಳ ಕಾಲ ಸಂರಕ್ಷಿಸಬಹುದಾಗಿದೆ. —(ಪ್ರಜಾವಾಣಿ)

**ಸಂಸ್ಕೃತ–ಪರಿಪೂರ್ಣ ಸರ್ವಸಾಮಾನ್ಯ ಭಾಷೆ***

"ಸಂಪದ್ಯುಕ್ತವಾದ, ರಮ್ಯ ಎನ್ನುವಷ್ಟು ವೈವಿಧ್ಯಮಯವಾದ ಭಾಷೆಗಳನ್ನುಳ್ಳ ದೇಶ ಭಾರತವನ್ನು ಬಿಟ್ಟರೆ ಪ್ರಪಂಚದಲ್ಲಿ ಬೇರೆ ಯಾವುದೂ ಇಲ್ಲ. ಆದರೆ ಈ ರಸವತ್ತಾದ ಭಾಷಾಸಂಪದವು ಒಂದು ಕಠಿನ ಸಮಸ್ಯೆಯನ್ನೂ ಮುಂದೊಡ್ಡಿದೆ. ರಾಜ್ಯ ರಾಜ್ಯಗಳ ನಡುವೆ ವ್ಯವಹಾರಕ್ಕಾಗಿ, ರಾಷ್ಟ್ರಮಟ್ಟದ ಆಡಳಿತಕ್ಕಾಗಿ, ವಿವಿಧ ಭಾಷಾ ಪ್ರದೇಶಗಳ ನಡುವಣ ವಾಣಿಜ್ಯವೇ ಮುಂತಾದ ಕೊಳುಕೊಡೆಗಳಿಗಾಗಿ ಒಂದು ಸರ್ವಸಾಮಾನ್ಯ ಭಾಷೆಯ ಅತ್ಯಗತ್ಯ ಇದೆ ಎಂಬುದೇ ಆ ಸಮಸ್ಯೆ.

ಈಗ ಹಿಂದಿ ಮತ್ತು ಇಂಗ್ಲಿಷ್ ಭಾಷೆಗಳು ಈ ಅಗತ್ಯಗಳನ್ನು ಪೂರಯಿಸುತ್ತಿವೆ. ಆದರೆ, ಇಂಗ್ಲಿಷನ್ನು ಪೂರ್ತಿಯಾಗಿ ಕೈಬಿಟ್ಟು ಹಿಂದಿಗೆ ಸರ್ವಮಾನ್ಯತೆಯನ್ನು ಕೊಡುವ ಪ್ರಯತ್ನಗಳು ಅಲ್ಲಿ ಇಲ್ಲಿ ನಡೆಯುತ್ತಿವೆ. ಆದರೆ, ರಾಷ್ಟ್ರಭಾಷೆಯ ಪಾತ್ರವನ್ನು ಈ ಎರಡು ಭಾಷೆಗಳಲ್ಲಿ ಯಾವುದೊಂದೂ ಯಶಸ್ವಿಯಾಗಿ ನಿರ್ವಹಿಸಲಾರದು.

ಭಾರತಮಾತೆಯ ಹೃದಯಸ್ಪಂದನದ, ನಾಡಿನ ಆತ್ಮತೇಜದ, ನಿಕಟಸಂಬಂಧವುಳ್ಳ ಯಾವ ಭಾರತೀಯನೂ ಇಂಗ್ಲಿಷು ಆಕೆಯ ಸಹಜಭಾಷೆ ಎನ್ನುವುದನ್ನು ನಂಬಲಾರ. ಇತ್ತಲಾಗಿ, ದಕ್ಷಿಣಭಾರತದ ಬಹುಸಂಖ್ಯೆಯ ಜನ ಹಿಂದಿಯನ್ನು ಒಲ್ಲದ ಮನಸ್ಸಿನಿಂದ ಒಪ್ಪಿಕೊಂಡಿದ್ದಾರೆ, ಇಲ್ಲವೆ ನಿರ್ದಾಕ್ಷಿಣ್ಯವಾಗಿ ತಿರಸ್ಕರಿಸಿದ್ದಾರೆ. ಅನೇಕ ವೇಳೆ ಭಾವೋದ್ರೇಕದಿಂದ ಕೂಡಿದ ಈ ಒಲ್ಲದ ಮನಸ್ಸು ಹಾಗೂ ತಿರಸ್ಕಾರ ಭಾವ ರಾಷ್ಟ್ರೀಯ ಐಕ್ಯಸಾಧನೆಯ ಪ್ರಯತ್ನಗಳಿಗೆ ಕಂಟಕಪ್ರಾಯವಾಗಿದೆ.

ಭಾವೋದ್ರೇಕದ ಮಾತು ಒತ್ತಟ್ಟಿಗಿರಲಿ. ಹಿಂದಿ ಕರ್ಣಮಧುರವಾದ ಭಾಷೆ. ಸಂಭಾಷಣೆಗೆ ಸುಗಮ ಸುಲಭ ಭಾಷೆ: ಹೀಗಿದ್ದರೂ ಅದಕ್ಕೆ ಕೆಲವು ಮಿತಿಗಳುಂಟು. ಪಾಶ್ಚಾತ್ಯ ಮತ್ತು ಭಾರತೀಯ ಭಾಷಾಪರಿಣತರು ಹೇಳುವಂತೆ, ಹಿಂದಿ ಬಂಗಾಳಿಯಷ್ಟು, ತಮಿಳಿನಷ್ಟು, (ಕನ್ನಡದಷ್ಟು ಎಂದೂ ಹೇಳಬಹುದಲ್ಲವೇ ?–ಎಂ.ವಿ.ಸೀ.)

---

* ಹಿಂದೂ ಪತ್ರಿಕೆಯ (8-9-1981) 'ತೆರೆದ ಪುಟ'ದಲ್ಲಿ Dr. Wilfried Huchzemeyer ಎಂಬವರು ಬರೆದಿದ್ದ ಇಂಗ್ಲಿಷ್ ಲೇಖನದ ಸಾರಸಂಗ್ರಹ.

ಸಂಪೂರ್ಣ ಭಾಷೆ ಅಲ್ಲ. ಅದು ಎಂದಿಗೂ ಎಲ್ಲ ಭಾರತೀಯ ವಿಶ್ವವಿದ್ಯಾನಿಲಯಗಳಲ್ಲಿಯೂ ಸರ್ವಸಾಮಾನ್ಯ ಬೋಧನ ಭಾಷೆ ಆಗುವ ನಿರೀಕ್ಷೆ ಇಟ್ಟುಕೊಳ್ಳಲಾರದು. ಗಣಿತ, ವಿಜ್ಞಾನ, ತತ್ತ್ವಶಾಸ್ತ್ರ ಮುಂತಾದ ಉನ್ನತ ಸಾಹಿತ್ಯದ ವಿಷಯಗಳನ್ನು ಹಿಂದಿಯಲ್ಲಿ ಬೋಧಿಸಲೇಬೇಕೆಂಬ ಬಲಾತ್ಕಾರಕ್ಕೆ ಒಳಗಾದ ವಿದ್ವಾಂಸರು ಆ ಬಗೆಗೆ ಜುಗುಪ್ಸೆಗೊಂಡರೆಂದು ಹೇಳಲಾಗಿದೆ. ಕಾರಣ, ಅಂಥ ವಿಷಯಗಳ ಬೋಧನೆಗೆ ಅದು ಆದರ್ಶವಾದ ಸಂವಹನ ಮಾಧ್ಯಮವಾಗಿಲ್ಲ ಎನ್ನುವುದು. ಎಷ್ಟೇ ಸುವಾಸನೆಯುಳ್ಳದ್ದಾಗಿರಲಿ, ಗುಲಾಬಿ ತೆಂಗಿನ ಫಲ ಕೊಟ್ಟೀತು ಎಂದು ನಿರೀಕ್ಷಿಸಲಾಗದು. ಅದೇ ರೀತಿ, ಹಿಂದಿ ಭಾರತದ ಸರ್ವಸಾಮಾನ್ಯ ರಾಷ್ಟ್ರಭಾಷೆ ಆಗಲಾರದಾಗಿರುವಾಗ ನಾವು ಹಾಗೆ ಆದೀತೆಂದು ನಿರೀಕ್ಷಿಸಬಾರದು.

ಈ ಸ್ಥಾನಕ್ಕೆ ಯೋಗ್ಯವಾಗಲು ಯಾವ ಭಾಷೆಯೇ ಆಗಲಿ ಈ ಕೆಳಗಿನ ಅಗತ್ಯಗಳನ್ನು ಪೂರಯಿಸುವಂತಿರಬೇಕು : (1) ಭಾರತದ ಎಲ್ಲ ಜನರೂ ಅದನ್ನು ಒಪ್ಪಿಕೊಳ್ಳಬೇಕು ; (೨) ಆಧುನಿಕ, ವೈಜ್ಞಾನಿಕ ಮತ್ತು ದಾರ್ಶನಿಕ ವಿಚಾರ ಪ್ರವೃತ್ತಿಗಳನ್ನು ಅನುಸರಿಸಲಾಗುವ ಮಟ್ಟಿಗೆ ಸಾಕಷ್ಟು ಬೆಳವಣಿಗೆ ಹೊಂದಿದ್ದು, ಆ ವಿಚಾರಗಳನ್ನು ಮನೋವ್ಯಾಪಾರದ ಎಲ್ಲ ಮಟ್ಟಗಳಲ್ಲೂ ವ್ಯಕ್ತಪಡಿಸಲು ಸಮರ್ಥವಾಗಿರಬೇಕು ; (೩) ಭಾವೀ ಋಷಿಗಳು, ಕವಿಗಳು ಮತ್ತು ತತ್ತ್ವಚಿಂತಕರು ತಮ್ಮ ಧ್ಯಾನಾಂತರ್ಬೋಧನೆಯಾಗಿ ಪಡೆದುಕೊಳ್ಳುವ ಸಂದೇಶಗಳನ್ನು ಗ್ರಹಿಸಿ ಇತರರಿಗೆ ತಿಳಿಯಹೇಳಲಾಗುವಮಟ್ಟಿಗೆ ಅದು ಭಾರತದ ಅಂತರಾತ್ಮಕ್ಕೆ ಸಮೀಪವರ್ತಿಯಾಗಿರಬೇಕು.

ಈ ಎಲ್ಲ ಅಗತ್ಯಗಳನ್ನೂ ಪೂರೈಸುವ ಏಕಮಾತ್ರ ಭಾಷೆ ಯಾವುದು ? ಉತ್ತರ ಸರಳವಾಗಿದೆ ; ಅದು ಸಂಸ್ಕೃತ. ಸಂಸ್ಕೃತವನ್ನು ಭಾರತದ ರಾಷ್ಟ್ರಭಾಷೆಯಾಗಿ ಅಂಗೀಕರಿಸಬೇಕು."

ವಿಲ್‌ಫ್ರೀಡ್ ಮಹಾಶಯರು ತಮ್ಮ ವಾದಸರಣಿಯನ್ನು ಮುಂದುವರಿಸುತ್ತ, "ಭಾರತದ ಯಾವ ಭಾಷೆಯ ಜನವರ್ಗಕ್ಕೂ ಸಂಸ್ಕೃತ ಅಸ್ವಾಭಾವಿಕವಾಗಿ ತೋರುವುದಿಲ್ಲ ; ಹಿಮಾಲಯದಿಂದ ಕನ್ಯಾಕುಮಾರಿಯವರೆಗೆ ದೇಶದ ಎಲ್ಲೆಡೆಯೂ ಸಂಸ್ಕೃತ ಮಹಾವಿದ್ವಾಂಸರಿದ್ದಾರೆ ; ವಾಸ್ತವವಾಗಿ, ಸಂಸ್ಕೃತ ಭಾಷಾಪಾಂಡಿತ್ಯದಲ್ಲಿ ದಕ್ಷಿಣ ಭಾರತದವರು ತಮ್ಮದೇ ಆದ ವಿಶಿಷ್ಟ ಸ್ಥಾನವನ್ನು ಗಳಿಸಿಕೊಂಡಿದ್ದಾರೆ : ಭಾರತದ ಎಲ್ಲ ಪ್ರಮುಖ ಭಾಷೆಗಳೂ ತಮ್ಮ ಶಬ್ದಸಂಪತ್ತನ್ನು ಸಂಸ್ಕೃತ ನೆರವಿನಿಂದ ಹೆಚ್ಚಿಸಿಕೊಂಡಿವೆ. ಆದ್ದರಿಂದ ಅದನ್ನು ದೇಶದ ಮಾತೃಭಾಷೆಯಾಗಿ ಒಪ್ಪಿಕೊಳ್ಳಬೇಕು" ಎಂಬ ತಮ್ಮ ಅಭಿಪ್ರಾಯವನ್ನು ಮುಂದಿಟ್ಟು, ಸಂಸ್ಕೃತವನ್ನು ರಾಷ್ಟ್ರಭಾಷೆಯಾಗಿ ಮಾಡುವುದಕ್ಕೆ ಪೂರ್ವಭಾವಿಯಾಗಿ ಎರಡು ಕಾರ್ಯಕ್ರಮಗಳನ್ನು ಕೈಗೊಳ್ಳಬೇಕೆಂದು ಸಲಹೆ ಮಾಡುತ್ತಾರೆ : (1) ಭಾರತದ ಎಲ್ಲ ಭಾಷಾಸಮಸ್ಯೆಗಳನ್ನೂ ಪರಿಹರಿಸುವ

ಶಕ್ತಿ ಇರುವುದು ಸಂಸ್ಕೃತಕ್ಕೆ ಮಾತ್ರ ಎಂಬುದನ್ನು ಭಾರತೀಯರು ಕಂಡುಕೊಳ್ಳಬೇಕು, ಅಂಗೀಕರಿಸಬೇಕು ; (2) ಸಂಸ್ಕೃತವನ್ನು ಆಡುನುಡಿಯಾಗಿ ಬಳಕೆಗೆ ತರಲು ಕಾರ್ಯಕ್ರಮ ಕೈಗೊಳ್ಳಬೇಕು. ಸಂಸ್ಕೃತವನ್ನು ಆಡುನುಡಿಯಾಗಿ ಬಳಕೆಗೆ ತರಲು ಏನು ಮಾಡಬೇಕು ಎಂಬುದರ ಬಗ್ಗೆಯೂ ಅವರು ಸಲಹೆ ನೀಡಿದ್ದಾರೆ.

ಸಂಸ್ಕೃತದ ಬಗೆಗೆ ಮಾನ್ಯ ಲೇಖಕರ ಕಳಕಳಿ, ಅಭಿಮಾನ ಮೆಚ್ಚುವಂಥದು. ಸಂಸ್ಕೃತ ಭಾಷೆ ಸಾಹಿತ್ಯ ಶಾಸ್ತ್ರಗಳ ಅಧ್ಯಯನಕ್ಕೆ ಈಗಿರುವುದಕ್ಕಿಂತ ಶತಾಧಿಕ ಪ್ರಮಾಣದಲ್ಲಿ ಉತ್ತೇಜನ ದೊರೆಯಬೇಕು ಎಂಬ ಬಗ್ಗೆಯೂ ಎರಡು ಅಭಿಪ್ರಾಯ ಇರಲಾರದು. ಭಾರತ ಸಂವಿಧಾನದ ಪ್ರಕಾರ ಅಂಗೀಕೃತ ರಾಷ್ಟ್ರಭಾಷೆಗಳು ಹಲವು ಇರುವಾಗ ಸಂಸ್ಕೃತವೊಂದನ್ನೇ ರಾಷ್ಟ್ರಭಾಷೆಯಾಗಿ ಒಪ್ಪಿಕೊಳ್ಳಬೇಕು ಎಂಬ ಅಭಿಪ್ರಾಯ ಸರ್ವಮಾನ್ಯತೆಯನ್ನು ಪಡೆಯಲಾರದು. 'ಸಂಪರ್ಕ ಭಾಷೆ' ಎನ್ನುವ ಅರ್ಥದಲ್ಲಿ ಲೇಖಕರು 'ರಾಷ್ಟ್ರಭಾಷೆ' (National Language) ಎಂಬ ಪದವನ್ನು ಬಳಸಿರಬಹುದು. ಸಂಸ್ಕೃತವನ್ನು ಮಾತೃಭಾಷೆ ಎಂದು ದೇಶ ಅಂಗೀಕರಿಸಬೇಕು ಎನ್ನುವ ಮಾತೂ ವಿಚಿತ್ರವಾಗಿಯೇ ಕಾಣುತ್ತದೆ. ಲೇಖಕರ ಸಲಹೆಗಳನ್ನು ಕಾರ್ಯಗತ ಮಾಡಿದ್ದಿದ್ದರೆ, ಈಗಿನ 'ತ್ರಿಭಾಷಾ ಸೂತ್ರ'ದ ಸ್ಥಾನದಲ್ಲಿ 'ದ್ವಿಭಾಷಾ ಸೂತ್ರ' ಜಾರಿಯಲ್ಲಿ ಬರಬೇಕಾಗುತ್ತದೆ. ಇಂಗ್ಲಿಷು ಪರಕೀಯ ಭಾಷೆಯಾಗಿರಬಹುದು. ಆದರೆ, ಭಾರತದಲ್ಲಿ ವ್ಯಾವಹಾರಿಕ ಸಂಪರ್ಕ ಭಾಷೆಯಾಗಿ ಇಂಗ್ಲಿಷು ಹಿಂದಿಗಿಂತ ಹೆಚ್ಚು ಬಳಕೆಯಲ್ಲಿದೆ. ಹಿಂದಿಯೇ ಸಂಪರ್ಕಭಾಷೆಯಾಗಿ ಅಂಗೀಕೃತವಾಗಿದೆ. ತಮಿಳುನಾಡು ದ್ವಿಭಾಷಾ ಸೂತ್ರವನ್ನು (ತಮಿಳು+ಇಂಗ್ಲಿಷು) ಜಾರಿಯಲ್ಲಿ ಇಟ್ಟುಕೊಂಡಿದೆ. ಹಿಂದಿ ಮಾತನಾಡುವ ಬಲುದೊಡ್ಡ ಪ್ರದೇಶ ಕಾರ್ಯತಃ ಏಕಭಾಷಾ ಸೂತ್ರವನ್ನು ಹೊಂದಿದೆ. ಅಂತರರಾಷ್ಟ್ರೀಯ ವ್ಯವಹಾರಕ್ಕೆ ಇಂಗ್ಲಿಷಿನ ಸ್ಥಾನದಲ್ಲಿ ಸಂಸ್ಕೃತ ಎಷ್ಟರಮಟ್ಟಿಗೆ ಉಪಯುಕ್ತವಾಗಬಲ್ಲದು ? ವಿಶಾಲ ಜಗತ್ತಿಗೆ ತೆರೆದಿರುವ ಕಿಟಕಿಯನ್ನು ಮುಚ್ಚಿಬಿಡೋಣವೆ ? ಯಾವ ದೃಷ್ಟಿಯಿಂದ ವಿಚಾರ ಮಾಡಿದರೂ ಲೇಖಕರ ಸಲಹೆ ಅನೇಕ ತೊಡಕುಗಳನ್ನು ಮುಂದೊಡ್ಡುತ್ತದೆ.

ಈ ಸಂದರ್ಭದಲ್ಲಿ, ಬಿ. ಎಂ. ಶ್ರೀ, ಯವರು ಬಲು ಹಿಂದೆಯೇ ನಮ್ಮ ಮುಂದಿಟ್ಟಿರುವ 'ತ್ರಿಭಾಷಾ ಸೂತ್ರ' ಗಂಭೀರವಾಗಿ ಪರಿಶೀಲಿಸಲು ಅರ್ಹವಾಗಿದೆ. ಅವರು ಹೇಳುತ್ತಾರೆ : "ಇಂಡಿಯದಲ್ಲಿ ವಿದ್ಯಾವಂತನೆನ್ನುವ ಪ್ರತಿಯೊಬ್ಬನೂ ಇಂಗ್ಲಿಷ್, ಸಂಸ್ಕೃತ, ತನ್ನ ಕಡೆಯ ದೇಶಭಾಷೆ—ಮೂರನ್ನೂ ಚೆನ್ನಾಗಿ ತಿಳಿದಿರಬೇಕು."

—ಎಂ. ವಿ. ಸೀ.

# ಪ್ರತಿಷ್ಠಾನ ವಾರ್ತೆ

## ಪುಸ್ತಕಗಳ ಬಿಡುಗಡೆ ಸಮಾರಂಭ

ಕೇಂದ್ರ ಸರ್ಕಾರದ ಆರ್ಥಿಕ ನೆರವಿನಿಂದ ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನವು ಪ್ರಕಟಿಸಿರುವ ಆರು ವಿದ್ವತ್ಪೂರ್ಣ ಗ್ರಂಥಗಳ ಹಾಗೂ ಪ್ರತಿಷ್ಠಾನ ಇತ್ತೀಚೆಗೆ ಪ್ರಾರಂಭಿಸಿರುವ 'ಲೋಚನ' ವೆಂಬ ಷಾಣ್ಮಾಸಿಕ ಪತ್ರಿಕೆಯ ಬಿಡುಗಡೆ ಸಮಾರಂಭವು 23-11-1983 ಬುಧವಾರದಂದು ನಗರದ ನರಸಿಂಹರಾಜ ಕಾಲೋನಿಯಲ್ಲಿರುವ ಗೋಖಲೆ ಸಾರ್ವಜನಿಕ ಸಂಸ್ಥೆಯ ಸಭಾಂಗಣದಲ್ಲಿ ನಡೆಯಿತು.

ಸಮಾರಂಭದ ಆರಂಭದಲ್ಲಿ ಪ್ರತಿಷ್ಠಾನದ ಅಧ್ಯಕ್ಷರಾದ ಶ್ರೀ ನಿಟ್ಟೂರು ಶ್ರೀನಿವಾಸ ರಾವ್ ಅವರು ಸಮಾರಂಭಕ್ಕೆ ಸರ್ವರನ್ನೂ ಸ್ವಾಗತಿಸಿ, ಕೇಂದ್ರಸರ್ಕಾರವು ನೀಡಿರುವ ಅನುದಾನವನ್ನು ಪ್ರಯೋಜನಕರವಾಗಿ ಪ್ರತಿಷ್ಠಾನ ಬಳಸಿಕೊಂಡಿದೆ ಎಂದರು.

ಪ್ರತಿಷ್ಠಾನದ ಸಂಸ್ಥಾಪಕ ಕಾರ್ಯದರ್ಶಿ ಪ್ರೊ॥ ಎಂ. ವಿ. ಸೀತಾರಾಮಯ್ಯನವರು ಪ್ರಾಸ್ತಾವಿಕ ಭಾಷಣ ಮಾಡುತ್ತಾ ಪ್ರತಿಷ್ಠಾನದ ಪ್ರಕಟನೆಗಳ ಬಗ್ಗೆ ಕೆಲವು ವಿವರಗಳನ್ನು ನೀಡಿ ಕಷ್ಟಸಾಧ್ಯವಾದ ಗ್ರಂಥ ಸಂಪಾದನೆ, ಪರಿಷ್ಕರಣ ಕಾರ್ಯಗಳಲ್ಲಿ ನೆರವಾದವರಿಗೆ ಕೃತಜ್ಞತೆಯನ್ನು ಅರ್ಪಿಸಿದರು. ಪ್ರಾಸಂಗಿಕವಾಗಿ ಶ್ರೀ ಜನ್ಮ ಶತಮಾನೋತ್ಸವದ ಬಗ್ಗೆ ಮಾತನಾಡಿದ ಅವರು ಅದರ ಅಂಗವಾಗಿ ನಿರ್ಮಿಸಬೇಕೆಂದಿರುವ 'ಶ್ರೀ ಸ್ಮಾರಕ ಭವನ'ಕ್ಕೆ ಸರ್ಕಾರವೂ, ಸಾರ್ವಜನಿಕರೂ ಉದಾರವಾಗಿ ಧನ ಸಹಾಯ ಮಾಡಬೇಕೆಂದು ಕೇಳಿಕೊಂಡರು.

'ಸೂತಭಾರತ', 'ಸರ್ವಜ್ಞ ವಚನಗಳು', 'ಶ್ರೀ ಕೃಷ್ಣದೇವರಾಯ ದಿನಚರಿ', 'ಮೂರು ದತ್ತಿ ಉಪನ್ಯಾಸಗಳು'. 'ಹಸ್ತಪ್ರತಿ ಶಾಸ್ತ್ರ' ಹಾಗೂ 'ಧ್ರುವ ಚರಿತ್ರೆ'– ಈ ಆರು ಗ್ರಂಥಗಳನ್ನು ಬಿಡುಗಡೆ ಮಾಡಿದವರು ಕನ್ನಡ ಮತ್ತು ಸಂಸ್ಕೃತಿ ಇಲಾಖೆಯ ರಾಜ್ಯ ಸಚಿವರಾದ ಮಾನ್ಯ ಶ್ರೀ ಜೀವರಾಜ ಆಳ್ವ ಅವರು, ಸಾಹಿತಿಗಳೂ ಬುದ್ಧಿಜೀವಿಗಳೂ ಜನತಾ ಸರ್ಕಾರದ ಜೀವಾಳ ; ಈ ವರ್ಗದ ಜನರ ಸಹಾಯ ಸಹಕಾರಗಳು ಆಡಳಿತ ಸೂತ್ರವನ್ನು ಹಿಡಿದವರಿಗೆ ಬೇಕೇ ಬೇಕು ; ಹಾಗೆಯೇ ವಿದ್ವತ್ಕಾರ್ಯಗಳನ್ನು ಮಾಡುವ ಸಂಘ ಸಂಸ್ಥೆಗಳಿಗೆ, ವ್ಯಕ್ತಿಗಳಿಗೆ ಸಹಾಯ ಮಾಡಬೇಕಾದ್ದು ಸರ್ಕಾರದ ಆದ್ಯ ಕರ್ತವ್ಯ, ನಾಲ್ಕು ಕಾಲ ನಿಲ್ಲಬಲ್ಲ ಉತ್ತಮ ಕಾರ್ಯಗಳನ್ನು ಮಾಡುತ್ತಿರುವ ಪ್ರತಿಷ್ಠಾನಕ್ಕೆ ರಾಜ್ಯ ಸರ್ಕಾರದಿಂದ ದೊರೆಯಬಹುದಾದ ನೆರವನ್ನು ದೊರಕಿಸಲು ತಾವು ಶ್ರಮಿಸುವುದಾಗಿ ಭರವಸೆ ನೀಡಿದರು.

'ಲೋಚನ' ಪಾಣ್ಮಾಸಿಕವನ್ನು ಬಿಡುಗಡೆ ಮಾಡಿದ ಪ್ರಸಿದ್ಧ ವಿದ್ವಾಂಸರಾದ ವಿದ್ಯಾವಿಭೂಷಣ ಶ್ರೀ ಎಂ. ಪಿ. ಎಲ್. ಶಾಸ್ತ್ರಿಯವರು ಆನಂದವರ್ಧನನ 'ಧ್ವನ್ಯಾಲೋಕ'ಕ್ಕೆ ದಾರ್ಶನಿಕ ಪಂಡಿತ ಅಭಿನವಗುಪ್ತನು ಬರೆದ ವ್ಯಾಖ್ಯಾನದ ಹೆಸರು 'ಲೋಚನ'. ಅದೇ ಹೆಸರನ್ನು ಈ ಪತ್ರಿಕೆಗೆ ಇಟ್ಟಿರುವುದು ಸಮರ್ಪಕ, ಅರ್ಥಪೂರ್ಣ ಎಂದರು. ಅವರು ಮುಂದುವರಿದು, ಇಂದಿನವರ ಆಲೋಚನೆ, ಸಂಶೋಧನೆ, ಇಂಥ ಪತ್ರಿಕೆಗಳ ಮೂಲಕವೇ ದಾಖಲಾಗಬೇಕು. ಒಂದು ಕೃತಿಯನ್ನು ವ್ಯಾಖ್ಯಾನಿಸುವಾಗ ಅದರಲ್ಲಿ ಏನಿದೆಯೋ ಅದನ್ನು ಬಿಟ್ಟು ವಿಷಯಾಂತರ ಮಾಡಿ ವ್ಯಾಖ್ಯಾನಿಸಬಾರದು ಎಂದರು.

ಬಿಡುಗಡೆಯಾದ ಕೃತಿಗಳಲ್ಲಿ 'ಶ್ರೀ ಕೃಷ್ಣದೇವರಾಯ ದಿನಚರಿ' ಕುರಿತು ಮಾತನಾಡಿದ ಡಾ॥ ಸೂರ್ಯನಾಥ ಕಾಮತರು ಇಲ್ಲಿ ಕೃಷ್ಣದೇವರಾಯನ ಆಡಳಿತ ವೈಖರಿಯ ಬಗ್ಗೆ ಕೆಲವು ಉಪಯುಕ್ತ ಅಂಶಗಳು ದೊರೆಯುತ್ತವೆ. ಕೃತಿಯಲ್ಲಿ ಶಬ್ದಸಂಪತ್ತು ಸಮೃದ್ಧಿಯಾಗಿದೆ. ಇಲ್ಲಿ ಬರುವ ಕೆಲವು ಪದಗಳು ಭಾಷಾಶಾಸ್ತ್ರ ದೃಷ್ಟಿಯಿಂದ ಮಹತ್ವವಾದವು. ಒಟ್ಟಾರೆ ಇದೊಂದು ಉಪಯುಕ್ತ ಗ್ರಂಥ ಎಂದು ಅಭಿಪ್ರಾಯಪಟ್ಟರು.

ಡಾ॥ ಜಿ. ಶಂಪಮೂರ್ತಿಯವರು 'ಸರ್ವಜ್ಞ ವಚನಗಳು' ಮತ್ತು 'ಹಸ್ತಪ್ರತಿ ಶಾಸ್ತ್ರ'ದ ಕೃತಿಗಳನ್ನು ಪರಿಚಯಿಸಿದರು. ಉತ್ತಂಗಿ ಚೆನ್ನಪ್ಪನವರು ಸಂಗ್ರಹಿಸಿ ಪ್ರಕಟಿಸಿರುವ ಸರ್ವಜ್ಞ ವಚನಗಳ ಸಂಕಲನವನ್ನು ಅಧಿಕೃತವಾಗಿ ಸ್ವೀಕರಿಸಲಾಗಿದೆ. ಅನಂತರ ಪ್ರಕಟವಾಗಿರುವ ಸರ್ವಜ್ಞ ವಚನಗಳ ಸಂಕಲನಗಳ ಪೈಕಿ ಡಾ॥ ಎಲ್. ಬಸವರಾಜು ಅವರು ಸಂಪಾದಿಸಿ ಪ್ರಕಟಿಸಿರುವ 'ಪರಮಾರ್ಥ' ಶ್ರೇಷ್ಠವಾದುದು. ಅದಾದ ನಂತರ ಬಂದಿರುವ ಗ್ರಂಥಗಳ ಪೈಕಿ ಪ್ರತಿಷ್ಠಾನ ಪ್ರಕಟಿಸಿರುವ 'ಸರ್ವಜ್ಞ ವಚನಗಳು' ಗಮನಾರ್ಹ ಎಂದರು.

ಪ್ರತಿಷ್ಠಾನ 1981ರಲ್ಲಿ ನಡೆಸಿದ ಹಸ್ತಪ್ರತಿ ಶಾಸ್ತ್ರ ವಿಚಾರಗೋಷ್ಠಿಯಲ್ಲಿ ಮಂಡಿಸಲಾದ ಪ್ರಬಂಧಗಳ ಸಂಕಲನವೇ 'ಹಸ್ತಪ್ರತಿ ಶಾಸ್ತ್ರ'. ಗ್ರಂಥ ಸಂಪಾದನೆಯಿಂದ ಹೊರತಾಗಿ ಉಳಿದಿರುವ ಈ ಶಾಖೆ ಇಂದು ಉಪೇಕ್ಷಿತವಾಗಿದ್ದರೂ ಮುಂದೆ ಬೆಳೆಯುತ್ತದೆ. ಗ್ರಂಥಸಂಪಾದನೆಗೆ ಪೂರಕವಾಗುತ್ತದೆ. ಹಸ್ತಪ್ರತಿ ಸಂಗ್ರಹಣೆ, ಗ್ರಂಥಸಂಪಾದನೆ—ಈ ಕಾರ್ಯಗಳಲ್ಲಿ ಸಾಕಷ್ಟು ದುಡಿದಿರುವ ಅನುಭವಪೂರ್ಣ ವಿದ್ವಾಂಸರ ಲೇಖನಗಳನ್ನೊಳಗೊಂಡ 'ಹಸ್ತಪ್ರತಿ ಶಾಸ್ತ್ರ' ಗ್ರಂಥ ತುಂಬಾ ಉಪಯುಕ್ತವಾದ ಕೃತಿ ಎಂದರು.

'ಸೂತಭಾರತ' ಮತ್ತು 'ಧ್ರುವಚರಿತ್ರೆ'ಯನ್ನು ವಿದ್ವಾನ್ ಶ್ರೀ ಎನ್. ರಂಗನಾಥಶರ್ಮರು ಪರಿಚಯಿಸಿದರು : 'ಸೂತಭಾರತ'ದ ಕವಿ ಯಾರೆಂದು ತಿಳಿದಿಲ್ಲ. ಪ್ರಾಯಃ ಇದು 17-18ನೇ ಶತಮಾನದಲ್ಲಿ ರಚಿತವಾಗಿರಬೇಕು. ಇಲ್ಲಿ

14 ಸಂಧಿಗಳಿವೆ. ಭಾಮಿನಿ ಷಟ್ಪದಿಯಲ್ಲಿ ಕೃತಿರಚನೆ ಆಗಿದೆ. ಕೃತಿಯಲ್ಲಿ ಹಲವಾರು ಸ್ವಾರಸ್ಯ ಸಂಗತಿಗಳಿವೆ: ಇಲ್ಲಿಯ ವರ್ಣನೆಗಳು ಸೊಗಸಾಗಿವೆ. ಮಹಾಭಾರತಕ್ಕೂ ಇದಕ್ಕೂ ಸುಮಾರು 37 ಕಡೆಗಳಲ್ಲಿ ವ್ಯತ್ಯಾಸವಿದೆ. ಗದುಗಿನ ಭಾರತ ಪೂರ್ಣವಾಗಿಲ್ಲವೆಂದು ಈತ ಪೂರ್ಣಗೊಳಿಸಲು ಮಹಾಪ್ರಸ್ಥಾನದ (ಸ್ವರ್ಗಾರೋಹಣ ಪರ್ವದ) ಕಥೆಯನ್ನು ಆಯ್ದಿದ್ದಾನೆ. ವಿಶೇಷವೆಂದರೆ, ಇಲ್ಲಿ ಪಾಂಡವರ ಜೊತೆಯಲ್ಲಿ ಕುಂತಿಯೂ ಸ್ವರ್ಗಾರೋಹಣದಲ್ಲಿ ಸೇರಿದ್ದಾಳೆ. ಇದು ತುಂಬಾ ವಿಶೇಷವಾದ ಬದಲಾವಣೆ—ಇದು ಸೂತಭಾರತದ ಬಗ್ಗೆ ರಂಗನಾಥಶರ್ಮರ ಪರಿಚಯ ಭಾಷಣದ ಸಾರಾಂಶ.

'ಧ್ರುವ ಚರಿತ್ರೆ'ಯ ಬಗ್ಗೆ ಮಾತನಾಡುತ್ತ 'ಧ್ರುವ ಚರಿತ್ರೆ'ಯ ಕರ್ತೃ ತಿಮ್ಮಪ್ಪದಾಸರು. ಕಾಲ, ದೇಶಗಳಿಂದ ನಮಗೆ ಹತ್ತಿರದವರು. ಕವಿ ಭಾಗವತವನ್ನು ಅನುಸರಿಸಿದ್ದಾರೆ. ಕೃತಿಯಲ್ಲಿ ಒಂದೇ ಒಂದು ಕಂದಪದ್ಯವಿದೆ. ಉಳಿದ ಭಾಗವೆಲ್ಲ ಸಾಂಗತ್ಯ. ಪರಿಚಿತ ಕಥೆ ನಿಮಿತ್ತ ಮಾತ್ರ. ಮಹಾಕಾವ್ಯದ ಲಕ್ಷಣಗಳನ್ನು ಕವಿ ಮೈಗೂಡಿಸಿಕೊಂಡಿದ್ದಾರೆ. ವಿದ್ವತ್ತಿನ ಚೌಕಟ್ಟು, ಛಂದಸ್ಸಿನ ಕಟ್ಟುನಿಟ್ಟು. ಜನಸಾಮಾನ್ಯರಿಗೆ ಪ್ರಿಯವಾಗುವ ಆಡುಭಾಷೆ–ಚಮತ್ಕಾರಗಳಿಗೆ ಹೆಚ್ಚು ಒತ್ತು ಕೊಡಲಾಗಿದೆ. 'ಮಡಿ ಮೀರಿ ಕೃತಿ ಓದಿದಾಗ' ಇದು ಆನಂದ ತರುವಂಥ ಕೃತಿ ಎಂಬುದು ವೇದ್ಯವಾಗುತ್ತದೆ–ಎಂದರು.

'ಲೋಚನ' ಪತ್ರಿಕೆಯ ಸಂಪಾದಕರಾದ ಶ್ರೀ ಟಿ. ಆರ್. ಮಹಾದೇವಯ್ಯನವರು 'ಲೋಚನ'ದಂಥ ವಿದ್ವತ್ ಪತ್ರಿಕೆಗೆ ಸರ್ಕಾರ ಪ್ರಸಾರವನ್ನು ಪರಿಗಣಿಸದೆ ಜಾಹಿರಾತು ನೀಡಿ ಪ್ರೋತ್ಸಾಹಿಸಬೇಕು ಎಂದರಲ್ಲದೆ ವ್ಯಾಸಂಗಪ್ರಿಯರು. ಸಹೃದಯರಿಂದ ಮಾತ್ರ ಇಂಥ ಪತ್ರಿಕೆಗಳು ನಡೆಯುತ್ತವೆ ಎಂದರು. 'ಮೂರು ದತ್ತಿ ಉಪನ್ಯಾಸಗಳು' ಕೃತಿಯ ಬಗ್ಗೆಯೂ ಮಹಾದೇವಯ್ಯನವರು ಮಾತನಾಡಿ ಪ್ರೊ|| ವಿ. ಎಸ್. ಮೂರ್ತಿರಾಯರ 'ಸಾಹಿತ್ಯ ಮತ್ತು ಸತ್ಯ', ಡಾ|| ಎಸ್. ವಿ. ರಂಗಣ್ಣನವರ 'ಶಬ್ದ ಮತ್ತು ಅರ್ಥ', ಡಾ|| ಎಚ್. ಎಸ್. ಬಿಳಿಗಿರಿ ಅವರ 'ಗಮಕ ಸಮಾಸವು ಸಮಾಸವೆ'—ಈ ಮೂರು ವಿದ್ವತ್ಪೂರ್ಣ ಉಪನ್ಯಾಸಗಳನ್ನು ಒಂದು ಸಂಕಲನದಲ್ಲಿ ತರಲಾಗಿದೆ. ಸಾಹಿತ್ಯ ಶಾಸ್ತ್ರದ ಅಧ್ಯಯನಕ್ಕೆ ಅಗತ್ಯವಾದ, ಸಂಗ್ರಹಯೋಗ್ಯವಾದ ಕೃತಿ ಇದು ಎಂದರು.

ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಪೂಜ್ಯ ಮಾಸ್ತಿಯವರು ಬಿ.ಎಂ.ಶ್ರೀ. ಅಂಥ ಮಹಾನುಭಾವರ ಹೆಸರಿನಲ್ಲಿ ಯಾವ ಕಾರ್ಯ ನಡೆದರೂ ಚೆನ್ನಾಗಿ ನಡೆಯುತ್ತದೆ. ಶ್ರೀಯವರ ಹೆಸರಿನಲ್ಲಿ ನಡೆಯುತ್ತಿರುವ ಪ್ರತಿಷ್ಠಾನ ಇನ್ನೂ ಶಾಶ್ವತವಾದ ಉತ್ತಮ ಕಾರ್ಯಗಳನ್ನು ಮಾಡುವಂತಾಗಲಿ ಎಂದು ಹಾರೈಸಿದರು.

---

# ಶ್ರದ್ಧಾಂಜಲಿ

**ವಿ. ಸೀ.**

ಪ್ರತಿಷ್ಠಾನದ ಗೌರವ ಸದಸ್ಯರೂ, ಪ್ರಖ್ಯಾತ ಸಾಹಿತಿಗಳೂ, ಅರ್ಥ ಶಾಸ್ತ್ರಜ್ಞರೂ ಆದ ವಿ. ಸೀತಾರಾಮಯ್ಯನವರು 4–9–83ರಂದು ನಿಧನರಾದರು. ವಿ. ಸೀ. ಎಂಬ ಕಾವ್ಯನಾಮದಿಂದ ಹಲವಾರು ಕವನ ಸಂಕಲನಗಳನ್ನೂ, ಅನೇಕ ವಿದ್ವತ್ಪೂರ್ಣ ಸ್ವತಂತ್ರ ಹಾಗೂ ಅನುವಾದಿತ ಕೃತಿಗಳನ್ನೂ ಬರೆದು ಕನ್ನಡ ಸಾಹಿತ್ಯದ ಶ್ರೀಮಂತಿಕೆಯನ್ನು ಹೆಚ್ಚಿಸಿದ ಸೀತಾರಾಮಯ್ಯನವರು 2–10–1899 ರಂದು ಬೆಂಗಳೂರು ಜಿಲ್ಲೆಯ ಬೂದಿಗೆರೆ ಗ್ರಾಮದಲ್ಲಿ ಜನಿಸಿದರು. ಪ್ರಾಥಮಿಕ ವಿದ್ಯಾಭ್ಯಾಸ ಬೆಂಗಳೂರಿನಲ್ಲಿ. ಮೈಸೂರು ಮಹಾರಾಜಾ ಕಾಲೇಜಿನಲ್ಲಿ ಉನ್ನತ ವ್ಯಾಸಂಗ. ರಾಜ್ಯಶಾಸ್ತ್ರ ಮತ್ತು ಅರ್ಥಶಾಸ್ತ್ರಗಳಲ್ಲಿ ಎಂ.ಎ. ಪದವಿ ಪಡೆದು ಕೆಲವು ಕಾಲ ಪ್ರೌಢಶಾಲೆಯಲ್ಲಿ ಉಪಾಧ್ಯಾಯರಾಗಿದ್ದರು. 1928ರಲ್ಲಿ ಕನ್ನಡ ಉಪನ್ಯಾಸಕರಾಗಿ ನೇಮಕಗೊಂಡ ಅವರು ಉಪಪ್ರಾಧ್ಯಾಪಕರಾಗಿ ನಿವೃತ್ತರಾದರು. ಎನ್. ಎನ್. ಸುಬ್ಬರಾಯರು (ಅರ್ಥಶಾಸ್ತ್ರ), ಬಿ.ಎಂ.ಶ್ರೀ. (ಇಂಗ್ಲಿಷ್ ಸಾಹಿತ್ಯ) ಈ ಇಬ್ಬರನ್ನೂ ಗುರುಗಳಾಗಿ ಪಡೆದ ಇವರು ಭಾಗ್ಯಶಾಲಿಗಳು.

1956–58ರವರೆಗೆ ಬೆಂಗಳೂರು ಆಕಾಶವಾಣಿ ಕೇಂದ್ರದಲ್ಲಿ ಕನ್ನಡ ಕಾರ್ಯಕ್ರಮ ಯೋಜಕರಾಗಿ ಸೇವೆ ಸಲ್ಲಿಸಿ, 1964–68ರವರೆಗ ಹೊಸ್ನಾಪರದ ಕಾಲೇಜಿನ ಪ್ರಿನ್ಸಿಪಾಲರಾಗಿದ್ದರು.

1923ರಲ್ಲಿ ವಿ.ಸೀ. ವಿದ್ಯಾರ್ಥಿಯಾಗಿದ್ದಾಗ ಬರೆದ ಕವನ 'ಒಲವು' ಪ್ರಬುದ್ಧ ಕರ್ನಾಟಕದಲ್ಲಿ (ಸಂ 5, ಸಂ–1) ಪ್ರಕಟವಾಯಿತು. ಇದು ಅವರ ಪ್ರಥಮ ಕವನ. 'ಗೀತಗಳು', 'ನೆಳಲು ಬೆಳಕು', 'ದ್ರಾಕ್ಷಿ ದಾಳಿಂಬೆ'. 'ಅರಲು ಬರಲು' ಇತ್ಯಾದಿ ಎಂಟು ಕವನ ಸಂಕಲನಗಳನ್ನು ಬರೆದು ಪ್ರಕಟಿಸಿವರು. ಪ್ರವಾಸ ಕಥನ, ಅರ್ಥ ಶಾಸ್ತ್ರ, ನಾಟಕ, ವಿಮರ್ಶೆ ಇತ್ಯಾದಿ ವಿಷಯಗಳ ಮೇಲೆ 21ಕ್ಕೂ ಹೆಚ್ಚು ಕೃತಿಗಳನ್ನು ಕನ್ನಡದಲ್ಲಿ ಬರೆದ ಅವರು ಇಂಗ್ಲಿಷಿನಲ್ಲಿ ಆರು ಕೃತಿಗಳನ್ನು ರಚಿಸಿದ್ದಾರೆ. ಅವರ ಪಂಪಾಯಾತ್ರೆ ಅತ್ಯಂತ ಜನಪ್ರಿಯ ಕೃತಿ. ಇಂಗ್ಲಿಷಿನಿಂದ ಆರು ಗ್ರಂಥಗಳನ್ನು ಅನುವಾದಿಸಿದ್ದಾರೆ. ಈ ಪೈಕಿ ಅಮೇರಿಕದ ಹರ್ಮನ್ ಮೆಲ್‌ವಿಲ್‌ನ ಮಹಾಕೃತಿ 'ಮೋಬಿಡಿಕ್' ವಿ.ಸೀ. ನಿಧನದ ಕೆಲವು ದಿನಗಳ ಮೊದಲಷ್ಟೇ ಪ್ರಕಟವಾಗಿದೆ.

ಮದ್ರಾಸಿನ ಹಿಂದೂ ಪತ್ರಿಕೆಯಲ್ಲಿ ಕನ್ನಡ ಕೃತಿಗಳ ಬಗ್ಗೆ ಎಂಟು ವರ್ಷಗಳ ಕಾಲ ವಿಮರ್ಶೆ ಮಾಡಿದ್ದರು. ಮೌಲ್ಯಪ್ರಜ್ಞೆ, ರಸಪ್ರಜ್ಞೆಯಿಂದ ಕೂಡಿದ ಅವರ ವಿಮರ್ಶೆಗಳು ಅವರ ಬಹುಶ್ರುತತ್ವಕ್ಕೂ ವಿದ್ವತ್ತಿಗೂ ಕನ್ನಡಿಯಾಗಿವೆ. 'ಪ್ರಬುದ್ಧ ಕರ್ನಾಟಕ'ದ ಸಂಪಾದಕರಾಗಿ, ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರಾಗಿ (1953),

ಕೇಂದ್ರ ಸಾಹಿತ್ಯ ಅಕಾಡೆಮಿಯ ಸದಸ್ಯರಾಗಿ (1954–70), ಭಾರತೀಯ ಜ್ಞಾನ ಪೀಠ ಪ್ರಶಸ್ತಿ ಸಲಹಾಮಂಡಲಿಯ ಸದಸ್ಯರಾಗಿ (1965–68) ಸೇವೆ ಸಲ್ಲಿಸಿದ್ದರು. ಕನ್ನಡ ನಾಡು–ನುಡಿಗೆ ಅವರು ಸಲ್ಲಿಸಿದ ಸೇವೆಗೆ ಕೃತಜ್ಞತೆಯ ಸಂಕೇತವಾಗಿ 1970 ರಲ್ಲಿ ವಿ.ಸೀ. ಅವರನ್ನು ಅನೇಕ ಪ್ರತಿಷ್ಠಿತ ವ್ಯಕ್ತಿಗಳ ಸಮ್ಮುಖದಲ್ಲಿ ಸನ್ಮಾನಿಸಲಾಯಿತು. 'ದೀಪಾರಾಧಕ', 'ವಿ.ಸೀ–75'–ಈ ಗ್ರಂಥಗಳು ವಿ.ಸೀ. ಅವರ ಬಗ್ಗೆ ಪ್ರಕಟವಾದ ಅಭಿನಂದನ ಗ್ರಂಥಗಳು. ಮೈಸೂರು ವಿಶ್ವವಿದ್ಯಾನಿಲಯ ಅವರಿಗೆ ಡಾಕ್ಟರೇಟ್ ಪದವಿ ನೀಡಿ ಗೌರವಿಸಿದೆ.

ಕನ್ನಡಕ್ಕೆ ಉಪೇಕ್ಷೆ ಅಪಾರವಾಗಿದ್ದ ಕಾಲದಲ್ಲಿ ಇಂಗ್ಲಿಷ್ ಭಾಷೆಯಲ್ಲೇ ಕನ್ನಡದ ಮಹತ್ತ್ವವನ್ನು ಸಾರಿದರು. ಓದಿದ್ದು ಅರ್ಥಶಾಸ್ತ್ರ, ರಾಜ್ಯಶಾಸ್ತ್ರಗಳಾದರೂ ಕನ್ನಡ ಸಾಹಿತ್ಯವನ್ನೂ ಸಂಸ್ಕೃತ ಕಾವ್ಯಗಳನ್ನೂ ಇಂಗ್ಲಿಷ್ ಸಾಹಿತ್ಯವನ್ನೂ ಆಳವಾಗಿ ಅಭ್ಯಸಿಸಿ ಮಹತ್ವ ಕೃತಿಗಳನ್ನು ಕೊಟ್ಟರು. ವಿ.ಸೀ. ಅವರ ಸಂಪಾದಕತ್ವದಲ್ಲಿ ಐ.ಬಿ.ಎಚ್. ಪ್ರಕಾಶನ ಪ್ರಕಟಿಸಿರುವ ಕವಿಕಾವ್ಯ ಪರಂಪರೆ ಗ್ರಂಥಮಾಲೆ ವಿಮರ್ಶಾ ಕ್ಷೇತ್ರಕ್ಕೆ ಉತ್ತಮ ಕೊಡುಗೆಯಾಗಿದೆ. ರುಚಿ, ಶುಚಿ ವಿ.ಸೀ. ಅವರಲ್ಲಿ ಮನೆ ಮಾಡಿದ್ದವು. ರಸಮಂತಿಕೆಯ ಸಾಕಾರ ಸ್ವರೂಪರಾಗಿದ್ದರು. ಅವರು ಕಾಣದಿದ್ದರೂ ಸಹ ಅವರ ಕೃತಿಗಳನ್ನು ನೋಡಿದರೆ ಈ ಮಾತಿನ ಸತ್ಯವನ್ನು ಕಾಣದೇ ಇರರು. ವಿ.ಸೀ. ಉದಾತ್ತ ವೇದಾಂತ ತತ್ವಗಳನ್ನು ಗ್ರಹಿಸಿ ಚಿಂತನಶೀಲರಾಗಿದ್ದರೂ ಸಹ ಜಗತ್ತಿನ ಬಗ್ಗೆ ಕವಿಯದು ರಸಿಕ, ಸಹಾನುಭೂತಿಯ ನಿಲುವು.

ವಿ. ಸೀ. ಅವರನ್ನು ಪ್ರತಿಷ್ಠಾನದ ಗೌರವ ಸದಸ್ಯರಲ್ಲಿ ಒಬ್ಬರಾಗಿ ಇರಬೇಕೆಂದು ಕೇಳಿಕೊಂಡಾಗ, ಒಡನೆ ಅವರಿಂದ ಒಪ್ಪಿಗೆಯ ಪತ್ರ ಬಂದಿತು. ಪತ್ರದ ಕೆಲವು ಸಾಲುಗಳು ಹೀಗಿವೆ : "ನಿಮ್ಮ ಪ್ರಯತ್ನ ಸ್ತುತ್ಯವಾದದ್ದು. ನನ್ನನ್ನು ಶ್ರೀಯವರ ಪ್ರಿಯಶಿಷ್ಯನೆಂದು ಕರೆದಿದ್ದೀರಿ. ಆ ಬಗ್ಗೆ ನನಗೆ ಸ್ಥಾನ. ಅಧಿಕಾರ ಇದೆಯೊ ಇಲ್ಲವೊ ಗೊತ್ತಿಲ್ಲ. ಅವರು ನನಗೆ ಸಾಹಿತ್ಯದ ಗುರುಗಳು. ಅವರ ನಾಯಕತ್ವದಲ್ಲಿ ಕೆಲವು ಕಾಲ ಕಳೆದಿದ್ದೇನೆ. ನೀವು ಕಲ್ಪಿಸಿರುವ ಗೋಷ್ಠಿಯಲ್ಲಿ ನನ್ನ ಹೆಸರನ್ನು ಸೇರಿಸುವುದು ಸಂತೋಷ : ಕೃತಜ್ಞತೆಯ ಸಂಗತಿ." ಇದು ವಿ.ಸೀ. ಅವರ ಸುಸಂಸ್ಕೃತ ಚೇತನಕ್ಕೆ ಸಂಕೇತ.

ಪ್ರತಿಷ್ಠಾನ 'ಲೋಚನ' ಪತ್ರಿಕೆಯನ್ನು ಪ್ರಕಟಿಸುವುದಾಗಿ ತಿಳಿಸಿ ಅವರ ಪ್ರಥಮ ಸಂಚಿಕೆಗೆ ಸಂದೇಶ ಕೇಳಿ ಬರೆದ ಪತ್ರಕ್ಕೆ ವಿ.ಸೀ. 18–7–83ರಂದು "ತನ್ನ ಉದ್ದೇಶಕ್ಕೆ ಸಫಲತೆ ದೊರಕಿಸಿಕೊಂಡು ಒಂದು ಹೊಸ ಆಯಾಮವನ್ನು ನಿಮ್ಮ ಈ ಪತ್ರಿಕೆ ತೆರೆಯುವಂತಾಗಲಿ" ಎಂದು ಹಾರೈಸಿ ಉತ್ತರ ಬರೆದರು. ಇದು ವಿ.ಸೀ. ಪ್ರತಿಷ್ಠಾನಕ್ಕೆ ಬರೆದ ಕೊನೆಯ ಪತ್ರ.

ವಿ.ಸೀ. ಮರೆಯಾಗಿದ್ದರೂ ಅವರ ಕೃತಿಗಳೂ, ಶುಭ ಹಾರೈಕೆಗಳೂ ಜೀವಂತ ವಾಗಿವೆ ; ಇತರರಿಗೆ ಮಾದರಿಯಾಗಿವೆ. ಇಂಥ ಹಿರಿಯರ ಅಭಿಮಾನ, ಹಾರೈಕೆಗಳು ಪ್ರತಿಷ್ಠಾನಕ್ಕೆ ಶ್ರೀರಕ್ಷೆ.

* * *

## ಬಡೆಕ್ಕಿಲ ವೆಂಕಟರಮಣ ಭಟ್ಟ

ನಾಡಿನ ಹಿರಿಯ ಸಾಹಿತಿಗಳಾದ ಬಡೆಕ್ಕಿಲ ವೆಂಕಟರಮಣ ಭಟ್ಟರು ಅಕ್ಟೋಬರ್ 4, 1983ರಂದು ನಿಧನರಾದರು. ಅವರಿಗೆ 96 ವರ್ಷ. ಸ್ವಪ್ರಯತ್ನದಿಂದ ಸಾಹಿತ್ಯ, ವೈದಿಕ ವಾಙ್ಮಯ, ಯಕ್ಷಗಾನ, ಜ್ಯೋತಿಷ್ಯ, ಇತ್ಯಾದಿ ವಿಷಯಗಳಲ್ಲಿ ಆಳವಾದ ಅಧ್ಯಯನ ಮಾಡಿದ್ದರು. ಸಾಹಿತ್ಯ ರಂಗದಲ್ಲೇ ಅಲ್ಲದೆ ಸಾಮಾಜಿಕ ಕ್ಷೇತ್ರದಲ್ಲೂ ಅವರು ಹೆಸರು ಮಾಡಿದ್ದರು.

ಭಗವದ್ಗೀತೆಯನ್ನು ಭಾಮಿನಿ ಷಟ್ಪದಿಯಲ್ಲಿ ಅನುವಾದಿಸಿದ್ದಾರೆ. 'ಭಾರತ ರಾಜ್ಯಭಾರಂ', 'ಸಮಾಜ ಸಂಗೀತ', 'ಭೀಮ ವಿಜಯಂ' ಮುಂತಾದ ಕಂದ. ಸಾಂಗತ್ಯ, ಯಕ್ಷಗಾನ, ಕೃತಿಗಳನ್ನು ರಚಿಸಿದ್ದಾರೆ.

ದಿವಂಗತ ಬಡೆಕ್ಕಿಲರ ಜೀವನ ಮತ್ತು ಕೃತಿಗಳ ಪರಿಚಯ ಮಾಡಿಕೊಡುವ 'ಕಾಣಿಕೆ' ಸಂಭಾವನಾ ಗ್ರಂಥ 1972ರಲ್ಲಿ ಪ್ರಕಟವಾಗಿದೆ.

* * *

1983ರಲ್ಲಿ ವಿ. ಸೀ. ಅವರು ತೀರಿಕೊಂಡ ಮೇಲೆ. 1984ರ ಹೊಸವರ್ಷದ ಆರಂಭದಲ್ಲೇ ಕನ್ನಡ ಲೋಕ ಮೂವರು ಗಣ್ಯ ಸಾಹಿತಿಗಳನ್ನು ಕಳೆದುಕೊಂಡಿತು. 13-1-84ರಂದು ಬೆಂಗಳೂರಿನಲ್ಲಿ ಕನ್ನಡದಲ್ಲಿ ಕೊರತೆಯಾಗಿದ್ದ ಹಾಸ್ಯ ಹಾಗೂ ವೈಜ್ಞಾನಿಕ ಸಾಹಿತ್ಯವನ್ನು ಶ್ರೀಮಂತಗೊಳಿಸಿದ ಎಂ. ಶಿವರಾಂ (ರಾಶಿ) ಅವರು. 16-1-84ರಂದು ಹುಬ್ಬಳ್ಳಿಯಲ್ಲಿ ಪ್ರಸಿದ್ಧ ಸಾಹಿತಿ, ಕವಿ, ನಿವೃತ್ತ ಪ್ರಾಚಾರ್ಯ ಡಾ॥ ಡಿ. ಎಸ್. ಕರ್ಕಿ ಅವರು. 25-1-84ರಂದು ಬೆಂಗಳೂರಿನಲ್ಲಿ ಹಿರಿಯ ಸಾಹಿತಿ, ಪತ್ರಿಕೋದ್ಯಮಿ ಬಿ. ಪುಟ್ಟಸ್ವಾಮಯ್ಯನವರು ನಮ್ಮನ್ನಗಲಿದರು.

## ಡಾ॥ ಎಂ. ಶಿವರಾಂ (ರಾಶಿ)

1) 10-11-1905ರಲ್ಲಿ ಬೆಂಗಳೂರಲ್ಲಿ ಜನಿಸಿದ ಡಾ॥ ಎಂ. ಶಿವರಾಂ ಅವರು ವೃತ್ತಿಯಲ್ಲಿ ವೈದ್ಯರು ; ಪ್ರವೃತ್ತಿಯಲ್ಲಿ ಸಾಹಿತಿಗಳು. ಅವರು ಪತ್ರಿಕೋದ್ಯೋಗಿಯೂ ಹೌದು. 'ಕೊರವಂಜಿ'ಯಂಥ ಹಾಸ್ಯ ಮಾಸಿಕವನ್ನು 25 ವರ್ಷಕ್ಕೂ ಹೆಚ್ಚು ಕಾಲ ನಡೆಸಿ ಕನ್ನಡ ಸಾಹಿತ್ಯದಲ್ಲಿದ್ದ ಹಾಸ್ಯದ ಕೊರತೆಯನ್ನು ತುಂಬಿದರು. ಅಲ್ಲದೆ ಅವರು ವಿಜ್ಞಾನ ಸಾಹಿತ್ಯವನ್ನು ರಚಿಸಿದರು. ಅವರ 'ಕಾಲ', 'ಮನ ಮಂಥನ', 'ಮನೋಸಂದನ'—ಆ ದಿಸೆಯಲ್ಲಿ ಗಮನಾರ್ಹ ಕೃತಿಗಳು. ಅವರು ಕರ್ನಾಟಕ ಸಾಹಿತ್ಯ ಅಕಾಡೆಮಿಯ ಅಧ್ಯಕ್ಷರಾಗಿದ್ದರು. ಕೇಂದ್ರ ಸಾಹಿತ್ಯ ಅಕಾಡೆಮಿಯು ಅವರ 'ಮನ ಮಂಥನ'ಕ್ಕೆ ರಾಷ್ಟ್ರಪ್ರಶಸ್ತಿ ನೀಡಿ ಗೌರವಿಸಿತ್ತು.

2) 1906ರಲ್ಲಿ ಬೆಳಗಾವಿ ಜಿಲ್ಲೆ ಹಿರೇಕೊಪ್ಪದಲ್ಲಿ ಜನಿಸಿದ ಡಾ॥ ದುಂಡಪ್ಪ ಸಿದ್ದಪ್ಪ ಕರ್ಕಿಯವರು ಹುಬ್ಬಳ್ಳಿಯ ಕಾಡಸಿದ್ದೇಶ್ವರ ಕಾಲೇಜಿನ ಪ್ರಾಚಾರ್ಯರಾಗಿ ನಿವೃತ್ತರಾಗಿದ್ದರು. ಇವರು 14ಕ್ಕೂ ಹೆಚ್ಚಿನ ಕೃತಿಗಳನ್ನು ರಚಿಸಿದ್ದಾರೆ. ಅವುಗಳಲ್ಲಿ 'ನಕ್ಷತ್ರಗಾನ', 'ಭಾವತೀರ್ಥ' ಎಂಬ ಕವನ ಸಂಕಲನವನ್ನು, 'ಕನ್ನಡ ಛಂದೋವಿಕಾಸ' ಎಂಬ ಸಂಶೋಧನ ಕೃತಿಗಳನ್ನು ಹೆಸರಿಸಬಹುದು.

3) 27–7–1897ರಲ್ಲಿ ಬೆಂಗಳೂರಲ್ಲಿ ಜನಿಸಿದ ಬಿ. ಪುಟ್ಟಸ್ವಾಮಯ್ಯನವರದು ಸಾಹಸಮಯವಾದ ಬದುಕು. ಅವರು ವೃತ್ತಿಯಲ್ಲಿ ಪತ್ರಿಕೋದ್ಯಮಿ. ಮಾತೃಭೂಮಿ, ಜಯಭಾರತ, ಜನವಾಣಿ, ಪ್ರಜಾವಾಣಿ ಮೊದಲಾದ ಪತ್ರಿಕೆಗಳಲ್ಲಿ ಸಂಪಾದಕರಾಗಿ ದುಡಿದಿದ್ದಾರೆ. ನಾಟಕ ಹಾಗೂ ಚಲನಚಿತ್ರ ಕ್ಷೇತ್ರಗಳಲ್ಲೂ ಅವರದು ಯಶಸ್ವಿಯಾದ ಗೆಯ್ಮೆ. 'ಸುಭದ್ರಾ' ಎಂಬ ಚಲನಚಿತ್ರ, ಗುಬ್ಬಿ ಕಂಪನಿಯವರ ಕುರುಕ್ಷೇತ್ರ, ಅಕ್ಕಮಹಾದೇವಿ, ದಶಾವತಾರ ಮೊದಲಾದ ನಾಟಕಗಳನ್ನೂ, ಮಹಮದ್ ಪೀರ್ ಅವರಿಂದ ಪ್ರಸಿದ್ಧಿಗೆ ಬಂದ 'ಗೌತಮ ಬುದ್ಧ' ನಾಟಕವನ್ನೂ ಇವರೇ ರಚಿಸಿದ್ದು. ಅಲ್ಲದೆ ಇವರು ಉತ್ತಮ ಕಾದಂಬರಿಕಾರರು. 'ರೂಪಲೇಖ', 'ಕ್ರಾಂತಿ ಕಲ್ಯಾಣ' ಮೊದಲಾದ ಕೃತಿಗಳು ತುಂಬಾ ಜನಪ್ರಿಯವಾಗಿದ್ದವು. ಇವರಿಗೆ 1978ರ ರಾಜ್ಯ ಅಕಾಡಮಿ ಫೆಲೋಷಿಪ್ ಗೌರವ ಸಂದಾಯವಾಗಿತ್ತು. ಇವರ 'ಕ್ರಾಂತಿಕಲ್ಯಾಣ'ಕ್ಕೆ ಕೇಂದ್ರ ಅಕಾಡಮಿ ಪ್ರಶಸ್ತಿಯೂ ಸಿಕ್ಕಿತ್ತು.

—ಈ ಮೂವರು ಕನ್ನಡ ನಾಡು–ನುಡಿ ಸೇವಕರ ನಿಧನಕ್ಕೆ 'ಲೋಚನ'ವು ತನ್ನ ಶ್ರದ್ಧಾಂಜಲಿಯನ್ನು ಅರ್ಪಿಸಿ, ಅವರ ಆತ್ಮಗಳಿಗೆ ಚಿರಶಾಂತಿ ಬಯಸುತ್ತದೆ.

* * *

## ಸಂಗೀತ ವಿದ್ವಾನ್ ಎನ್. ಚೆನ್ನಕೇಶವಯ್ಯ

ಮೈಸೂರು ಕೆ. ವಾಸುದೇವಾಚಾರ್ಯರ ಪ್ರಮುಖ ಶಿಷ್ಯರೂ ಮೈಸೂರು ಅರಮನೆಯ ಆಸ್ಥಾನ ವಿದ್ವಾಂಸರೂ ಆಗಿದ್ದ, 88 ವರ್ಷಗಳ ತುಂಬು ಜೀವನ ನಡೆಸಿದ, ವಿದ್ವಾನ್ ಎನ್. ಚೆನ್ನಕೇಶವಯ್ಯನವರು 12–2–84ರಂದು ದೈವಾಧೀನರಾದದ್ದು ಸಂಗೀತ ಶಾಸ್ತ್ರ ಪ್ರಪಂಚಕ್ಕೂ ಗಾಯನ ಕಲೆಗೂ ದೊಡ್ಡ ನಷ್ಟ. ಅವರ 'ಹರಿದಾಸ ಕೀರ್ತನ ಸುಧಾಸಾಗರ'–ಕೃತಿಗೆ ಕೇಂದ್ರ ಸಂಗೀತ ನಾಟಕ ಅಕಾಡೆಮಿ ಪ್ರಶಸ್ತಿ ಲಭಿಸಿತ್ತು. ರಾಜ್ಯ ಸಂಗೀತ ನಾಟಕ ಅಕಾಡೆಮಿಯಿಂದಲೂ ಅವರು ಪುರಸ್ಕೃತರು. ಹಲವು ಸಂಗೀತ ಶಾಸ್ತ್ರ ಗ್ರಂಥಗಳನ್ನು ಇವರು ರಚಿಸಿದ್ದಾರೆ.

---

# ಅಭಿನಂದನೆ

## ೫೬ನೆಯ ಕನ್ನಡ ಸಾಹಿತ್ಯ ಸಮ್ಮೇಳನದ ಅಧ್ಯಕ್ಷರು ಡಾ॥ ಎ. ಎನ್. ಮೂರ್ತಿರಾವ್

56ನೆಯ ಕನ್ನಡ ಸಾಹಿತ್ಯ ಸಮ್ಮೇಳನಕ್ಕೆ ಎ. (ಅಕ್ಕಿ ಹೆಬ್ಬಾಳು) ಎನ್. (ನರಸಿಂಹ) ಮೂರ್ತಿರಾಯರನ್ನು ಅಧ್ಯಕ್ಷರನ್ನಾಗಿ ಆರಿಸಿರುವುದು ಸರ್ವಾದರಣೀಯವಾದ ವಿಚಾರವಾಗಿದೆ. ಮೂರ್ತಿರಾಯರು ಕನ್ನಡ ಸಾಹಿತ್ಯ ಪ್ರಪಂಚದಲ್ಲಿ ಖ್ಯಾತನಾಮರಾಗಿದ್ದು ಅನೇಕ ಕೃತಿಗಳನ್ನು ರಚಿಸಿದ್ದಾರೆ. ಕನ್ನಡದಲ್ಲಿ ಪ್ರಬಂಧ ಸಾಹಿತ್ಯ ಕ್ಷೇತ್ರದಲ್ಲಿ ಮೊದಲು ಗಮನಿಸಬೇಕಾದ ಹೆಸರು ಅವರದು. ಇಂಗ್ಲಿಷಿನಿಂದ ಕನ್ನಡಕ್ಕೆ ಅನುವಾದ ಮಾಡುವುದರಲ್ಲಿಯೂ ಅವರ ಕಾರ್ಯ ಅತ್ಯಂತ ಸ್ತುತ್ಯವಾಗಿದೆ. ಈಚೆಗೆ ಪ್ರಕಟವಾದ ಅವರ ಕೃತಿ 'ಚಂಡಮಾರುತ', ಶೇಕ್ಸ್‌ಪಿಯರನ 'The Tempest' ನಾಟಕದ ಅತ್ಯಂತ ಸಮರ್ಥವಾದ ಅನುವಾದವಾಗಿದೆ. ಕೇಂದ್ರ ಸಾಹಿತ್ಯ ಅಕಾಡೆಮಿಯಿಂದಲೂ ರಾಜ್ಯ ಸಾಹಿತ್ಯ ಅಕಾಡೆಮಿಯಿಂದಲೂ ಪ್ರಶಸ್ತಿ ಪಡೆದಿರುವ ಶ್ರೀಯುತರ ಅಧ್ಯಕ್ಷತೆಯಲ್ಲಿ ಈ ಸಾರಿಯ ಸಾಹಿತ್ಯ ಸಮ್ಮೇಳನವು ತುಂಬ ಯಶಸ್ವಿಯಾಗುವುದರಲ್ಲಿ ಅನುಮಾನವಿಲ್ಲ.

ಕೃತಿ ರಚನೆಯಲ್ಲಿ ಸರ್ವಸಂಪೂರ್ಣತೆಗೆ ಸದಾ ಪ್ರಯತ್ನ ಪಡುವ ಅವರ ಅಭಿರುಚಿ ಕನ್ನಡ ಲೇಖಕರಿಗೆ ಮಾರ್ಗದರ್ಶಕವಾಗಿದೆ ಎಂಬುದನ್ನು ಈ ಸಂದರ್ಭದಲ್ಲಿ ಕನ್ನಡಿಗರ ಗಮನಕ್ಕೆ ತರಲು 'ಲೋಚನ'ಕ್ಕೆ ತುಂಬ ಸಂತೋಷವಾಗುತ್ತದೆ.

## ಪದ್ಮಭೂಷಣ ಡಾ॥ ಎಚ್. ನರಸಿಂಹಯ್ಯ

ನ್ಯಾಷನಲ್ ಕಾಲೇಜಿನ ಪ್ರಿನ್ಸಿಪಾಲರೂ ಬೆಂಗಳೂರು ವಿಶ್ವವಿದ್ಯಾನಿಲಯದ ಮಾಜಿ ಉಪಕುಲಪತಿಗಳೂ ಆಗಿದ್ದ ಡಾ॥ ಎಚ್. ನರಸಿಂಹಯ್ಯನವರಿಗೆ ಈ ವರ್ಷದ ಗಣರಾಜ್ಯ ದಿನೋತ್ಸವದ ಸಂದರ್ಭದಲ್ಲಿ ಕೇಂದ್ರ ಸರ್ಕಾರ ಅವರಿಗೆ ಪದ್ಮಭೂಷಣ ಪ್ರಶಸ್ತಿಯನ್ನು ನೀಡಿ ಗೌರವಿಸಿರುವುದು ಕನ್ನಡಿಗರಿಗೆ ಸಂತೋಷ ಕೊಡುವ ಸಂಗತಿ. ಶಿಕ್ಷಣ ಕ್ಷೇತ್ರದಲ್ಲಿ ಹೆಸರು ಮಾಡಿದ ಇವರು ನಿಷ್ಠಾವಂತ ಗಾಂಧೀವಾದಿಗಳು: ರಾಮಕೃಷ್ಣ ಪರಮಹಂಸ ಹಾಗೂ ವಿವೇಕಾನಂದರ ಬೋಧೆಗಳಿಂದ ಪ್ರಭಾವಿತರಾದವರು: ಜನರಲ್ಲಿ ವೈಜ್ಞಾನಿಕ ಮನೋಧರ್ಮ. ವೈಚಾರಿಕತೆ ಬೆಳೆಯಬೇಕೆಂದು ಶ್ರಮಿಸುತ್ತಿರುವವರು: ಎಲ್ಲಕ್ಕಿಂತ ಮಿಗಿಲಾಗಿ, ಎಲ್ಲ ಹಂತಗಳಲ್ಲೂ ಕನ್ನಡ ಶಿಕ್ಷಣ ಮಾಧ್ಯಮ ಆಗಬೇಕೆಂದು ಸ್ಪಷ್ಟವಾದ ಅಭಿಪ್ರಾಯವನ್ನು ತಳೆದಿರುವವರು, ವ್ಯಕ್ತಪಡಿಸುತ್ತಿರುವವರು. ರಾಷ್ಟ್ರಮಟ್ಟದ ಪ್ರಶಸ್ತಿಯನ್ನು ಪಡೆದ ಡಾ॥ ನರಸಿಂಹಯ್ಯನವರಿಗೆ ಪ್ರತಿಷ್ಠಾನದ ಪರವಾಗಿ 'ಲೋಚನ'ದ ಅಭಿನಂದನೆಗಳು.

## ರಾಷ್ಟ್ರೀಯ ಪ್ರಾಧ್ಯಾಪಕ ಡಾ॥ ವಿ. ಕೆ. ಆರ್. ವಿ. ರಾವ್

ಕರ್ನಾಟಕಕ್ಕೆ ಕೀರ್ತಿ ತಂದ ಇನ್ನೊಬ್ಬರು ಮಹನೀಯರು ಡಾ॥ ವಿಜಯೇಂದ್ರ ಕಸ್ತೂರಿರಂಗ ವರದರಾಜರಾವ್. ಅಂತರರಾಷ್ಟ್ರೀಯ ಖ್ಯಾತಿಯ ಅರ್ಥಶಾಸ್ತ್ರ ಪ್ರವೀಣರಾದ ಡಾ॥ ರಾವ್ ಅವರು ಖ್ಯಾತ ಅರ್ಥಶಾಸ್ತ್ರವೇತ್ತರು ಮಾತ್ರವಲ್ಲದೆ ಕೇಂದ್ರ ಸರ್ಕಾರದ ಶಿಕ್ಷಣ ಮಂತ್ರಿಯಾಗಿ, ಯೋಜನ ಆಯೋಗದ ಸದಸ್ಯರಾಗಿ. ರಾಷ್ಟ್ರಸೇವೆ ಮಾಡಿದ್ದಾರೆ. ಅರ್ಥಶಾಸ್ತ್ರ ವಿಷಯಗಳಿಗೆ ಸಂಬಂಧಪಟ್ಟಂತೆ ದೆಹಲಿಯಲ್ಲಿ ಎರಡು ಮಹಾ ಶಿಕ್ಷಣಸಂಸ್ಥೆಗಳನ್ನೂ ಬೆಂಗಳೂರಿನಲ್ಲಿ ಒಂದು ಸಂಸ್ಥೆಯನ್ನೂ (Institute for Social and Economic Change) ಸ್ಥಾಪಿಸಿದ್ದಾರೆ. ಬೋಧನೆಯೇ ಇವರಿಗೆ ಸಹಜವಾದ ವೃತ್ತಿ, ಅದರಲ್ಲಿಯೇ ಇವರ ಪ್ರವೃತ್ತಿ. ಅವರಿಗೆ ಇದೀಗ ದೊರೆತ ರಾಷ್ಟ್ರೀಯ ಪ್ರಾಧ್ಯಾಪಕತ್ವವು ಅವರ ವಿದ್ವತ್ತಿಗೆ ತಕ್ಕ ಘನತೆವೆತ್ತ ಪದವಿ. ಪ್ರತಿಷ್ಠಾನ ಕೈಗೊಂಡು ನಡಸುತ್ತಿರುವ ಬಿ.ಎಂ.ಶ್ರೀ. ಜನ್ಮ ಶತಮಾನೋತ್ಸವದ ಪೋಷಕರಾಗಿರಲು ಒಪ್ಪಿಕೊಂಡು ನಮಗೆ ಆತ್ಮೀಯರಾಗಿದ್ದಾರೆ. ಕರ್ನಾಟಕಕ್ಕೆ ಹೆಮ್ಮೆಯನ್ನು ತಂದುಕೊಟ್ಟ ರಾಷ್ಟ್ರೀಯ ಪ್ರಾಧ್ಯಾಪಕ ಡಾ॥ ವಿ. ಕೆ. ಆರ್. ವಿ. ರಾವ್ ಅವರಿಗೂ ನಮ್ಮ ಅಭಿನಂದನೆಗಳು.

---

# ಬಿ.ಎಂ.ಶ್ರೀ. ಜನ್ಮಶತಮಾನೋತ್ಸವ: ದಾನಿಗಳು

(ಕಳೆದ ಸಂಚಿಕೆಯಿಂದ; ಸೂಚನೆ: ಬೆಂ = ಬೆಂಗಳೂರು)

**ರೂ. 20,000**

ಎಸ್. ಡಿ. ಎಸ್. ರಾವ್. ಪುಣೆ (ಕಟ್ಟಡ ನಿಧಿಗೆ)

**ರೂ. 3.000**

ಎಂ. ವಿ. ಸೀತಾರಾಮಯ್ಯ. ಬೆಂಗಳೂರು (ಕನ್ನಡ ರಾಜ್ಯೋತ್ಸವ ಸಂದರ್ಭದಲ್ಲಿ ವಿವಿಧ ಸಂಘ ಸಂಸ್ಥೆಗಳು ಶ್ರೀಯುತರಿಗೆ ನೀಡಿದ ಸನ್ಮಾನ ನಿಧಿ. ಕಟ್ಟಡ ನಿಧಿಗಾಗಿ)

**ರೂ. 1,100**

ವೆಂಕಟಲಕ್ಷ್ಮಮ್ಮ. ಬೆಂಗಳೂರು (1.000 ರೂ. ಪ್ರತಿಷ್ಠಾನದ ಮೂಲ ನಿಧಿಗಾಗಿ)

**ರೂ. 700**

ಎಸ್. ನಂಜುಂಡಸ್ವಾಮಿ. ಬೆಂಗಳೂರು (ಕಟ್ಟಡ ನಿಧಿಗಾಗಿ ರೂ. 200)

**ರೂ. 500**

ಸಿ. ಎಸ್. ಲಕ್ಷ್ಮಣರಾವ್ ಮತ್ತು ಪುಟ್ಟಮ್ಮ ಲಕ್ಷ್ಮಣರಾವ್. ಬೆಂ.

**ರೂ. 250**

ಶ್ರೀಮತಿ ಲಕ್ಷ್ಮೀದೇವಮ್ಮ ಶ್ರೀ ಎಸ್. ನಾಗಪ್ಪ ಮೆಮೋರಿಯಲ್ ಟ್ರಸ್ಟ್. ಬೆಂಗಳೂರು.

**ರೂ. 100**

ಡಿ. ಎನ್. ವೆಂಕಟರಮಣಯ್ಯ. ಪುತ್ತೂರು : ಎಂ. ವಾಸುದೇವರಾವ್. ಪ್ಯಾಪ್ಲಾಡಿ : ಗೊರೂರು ನರಸಿಂಹಮೂರ್ತಿ. ಬೆಂಗಳೂರು; ನಿಟ್ಟೂರು ಶ್ರೀನಿವಾಸ ರಾವ್, ಬೆಂಗಳೂರು : ಸ. ಸ. ಮಾಳವಾಡ. ಧಾರವಾಡ : ಬಿ. ಎಂ. ಶಿವರಾಮಯ್ಯ. ನಂಜನಗೂಡು : ನಿರುಪಮಾ. ಬೆಂಗಳೂರು : ಬಿ. ವಿ. ಕೆ. ಶಾಸ್ತ್ರಿ. ಬೆಂಗಳೂರು : ಆಲ್ಫೋನ್ಸಿಕ್ಸ್. ಬೆಂಗಳೂರು : ಡಾ॥ ಎನ್. ಅನಂತರಂಗಾಚಾರ್. ಮೈಸೂರು.

**ರೂ. 50**

ಎಂ. ಎಲ್. ಲಲಿತಮ್ಮ. ಬೆಂಗಳೂರು ; ಎಂ. ಎಸ್. ರಾಮಪ್ರಸಾದ್, ಬೆಂಗಳೂರು ; ಜಿ. ಎಸ್. ವೆಂಕಟರಾಜು, ಬೆಂಗಳೂರು ; ಎಸ್. ಆರ್. ನಾಗಪ್ಪ, ಬೆಂಗಳೂರು.

ರೂ. 35

ಪ್ರೊ॥ ಜಿ. ನ. ಮಂಗಳ, ಬೆಂಗಳೂರು.

ರೂ. 30

ಅಲಂಕಾರ್ ಟ್ರೇಡರ್ಸ್, ಬೆಂಗಳೂರು.

ರೂ. 25

ಎಚ್. ಎನ್. ಕೃಷ್ಣಮೂರ್ತಿ. ಬೆಂಗಳೂರು: ಎಂ. ಪದ್ಮಾವತಿ, ಬೆಂಗಳೂರು: ಎಚ್. ಎಸ್. ಮಹಾಲಕ್ಷ್ಮಿ. ಬೆಂಗಳೂರು: ಗರ್ಗೇಶ್ವರಿ ವೆಂಕಟಸುಬ್ಬಯ್ಯ, ಬೆಂ.

ರೂ. 20

ಎಚ್. ಕೆ. ಜ್ಯೋತಿ, ಬೆಂಗಳೂರು,

ರೂ. 15

ಎಸ್. ಶ್ರೀನಿವಾಸರಾವ್, ಬೆಂಗಳೂರು.

ರೂ. 10

ಬಿ. ಎಸ್. ನಾಗರಾಜರಾಯರು, ತೀರ್ಥಹಳ್ಳಿ. ಗಮಕ ವಿದ್ವಾನ್ ಎನ್. ಚನ್ನಬಸಪ್ಪ, ಬೆಂ. ಬಸವರಾಜ್, ತೀರ್ಥಹಳ್ಳಿ. ಬಿ. ಎಸ್. ಗಿರಿಜ, ಬೆಂ. ಎ. ಎಸ್. ವಿಶ್ವನಾಥ್, ಬೆಂ. ಡಾ॥ ಎಸ್. ಕೃಷ್ಣಭಟ್, ಬೆಂ. ಸತ್ಯನಾರಾಯಣ, ಬೆಂ. ಬಿ. ಸೀತಾರಾಮೈಯಂಗಾರ್, ಬೆಂ. ಕೃಷ್ಣಪ್ಪ, ಬೆಂ. ಜ್ವಾಲಾಮುಖಿ ಮುದ್ರಣ, ಬೆಂ. ವೈ. ಎಸ್. ಅನಂತ ಮತ್ತು ಸುಧಾ, ಬೆಂ. ಶ್ರೀ ರಾಧಾಕೃಷ್ಣ ಬಾಲಕಿಯರ ಪ್ರೌಢಶಾಲೆ, ಬೆಂ. ಬಿ. ಎಸ್. ಕೃಷ್ಣಮೂರ್ತಿ, ಬೆಂ. ಜಿ. ಪಿ. ನಾಗರಾಜನ್, ಬೆಂ. ಉಷಾ, ಬೆಂ. ಸರೋಜಮೂರ್ತಿ, ಬೆಂ.

ರೂ. 5

ಒಬ್ಬ ಅಭಿಮಾನಿ, ಬಿ. ಇ. ಎಂ. ಎಲ್. ಕನ್ನಡ ಸಂಘ, ಬೆಂ. ಸಂಜೀವ ರಾಯರು, ಬೆಂ. ಶ್ರೀಕಂಠೇಶ್ವರ ಎಂಟರ್‌ಪ್ರೈಸಸ್, ಬೆಂ. ಎಚ್. ಭಾಸ್ಕರಭಟ್ಟರು, ತೀರ್ಥಹಳ್ಳಿ. ಎಸ್. ರಾಮಸ್ವಾಮಿ, ತೀರ್ಥಹಳ್ಳಿ. ಎನ್. ಎಸ್. ಅನಂತಸ್ವಾಮಿ, ಬೆಂ. ಎಸ್. ವಿ. ಶ್ರೀನಿವಾಸನ್, ಬೆಂ. ಎಂ. ಎಚ್. ಲಕ್ಷ್ಮಮ್ಮ, ಬೆಂ. ಬಿ. ಎನ್. ಪದ್ಮನಾಭ, ಬೆಂ. ಎಂ. ಜಿ. ನರಸಿಂಹ ಮೂರ್ತಿ, ಬೆಂ. ಪ್ರಿನ್ಸಿಪಾಲ್. ಜ್ಞಾನಮಿತ್ರ ವಿದ್ಯಾಸಂಸ್ಥೆ. ಬೆಂ. ಮಾಸ್ತಿ ಮುದ್ರಣಾಲಯ, ಬೆಂ. ಜಿ. ಬಿ. ಸದಾಶಿವಯ್ಯ, ಬೆಂ. ಕೆ. ರಾಮಮೋಹನ್, ಬೆಂ. ಎಚ್. ವಿ. ನಿರ್ಮಲ. ಮೈಸೂರು. ಪ್ರಭಾಕರ್, ಬೆಂ. ಸುರೇಖ ಎ. ಪೋಟ್ನೀಸ್, ಬೆಂ. ಎ.ಆರ್. ಎಸ್. ಶರ್ಮ, ಬೆಂ. ವೈ.ಎ. ಹರಿಣಿ, ಬೆಂ. ಆರ್. ಕೃಷ್ಣಮೂರ್ತಿ. ಬೆಂ. ಎನ್. ವರದರಾಜನ್, ಬೆಂ. ಬಿ.ವಿ. ವಿಜಯವಾಣಿ. ಬೆಂ. ರಾಘವೇಂದ್ರ. ಬೆಂ.

ಬಾಲಸುಬ್ರಹ್ಮಣ್ಯಂ. ಬೆಂ. ಎಚ್.ವಿ. ದಾಮೋದರ. ಮದ್ರಾಸ್. ಸಂಜೀವರಾವ್. ಬೆಂ. ಎಸ್. ರಾಜಾರಾವ್. ಬೆಮೆಲ್. ಬೆಂ. ಎಸ್. ಸುದರ್ಶನ್ ಮತ್ತು ರಂಗಾರೆಡ್ಡಿ ಬೆಮೆಲ್. ಬೆಂ. ಆರ್.ಜಿ. ಪಾಟೀಲ್ ಬೆಮೆಲ್. ಬೆಂ. ಪಿ. ಜಯರಾಂ ಬೆಮೆಲ್. ಬೆಂ. ಉದಯಶಂಕರ್ ಬೆಮೆಲ್, ಬೆಂ. ಟಿ.ಕೆ. ಸುಗತ ಬೆಮೆಲ್. ಬೆಂ. ಎಂ.ಟಿ. ಸಂಪತ್‌ಕುಮಾರನ್. ಬೆಮೆಲ್. ಬೆಂ. ಬಿ.ವಿ. ಜಯಶೀಲರಾವ್, ಬೆಮೆಲ್. ಬೆಂ. ಎನ್. ಪ್ರಭಾಕರ್. ಬೆಮೆಲ್. ಬೆಂ. ಪಿ.ಎಸ್. ಶ್ರೀನಿವಾಸನ್, ಬೆಮೆಲ್. ಬೆಂ. ಎ.ಎಸ್. ರಾಮಪ್ರಸಾದ್. ಬೆಮೆಲ್. ಬೆಂ. ವಿ.ವಿ. ಪಾಂಡುರಂಗರಾವ್. ಬೆಮೆಲ್. ಬೆಂ. ಜಿ.ಡಿ. ಶಿವಲಿಂಗಯ್ಯ. ಬೆಮೆಲ್. ಬೆಂ. ಚಂದ್ರಶೇಖರ. ಎಸ್.ಎಸ್. ಬೆಮೆಲ್. ಬೆಂ. ದೇವೇಂದ್ರನಾಥ್. ಬೆಮೆಲ್. ಬೆಂ. ಪ್ರಕಾಶ್ ಕಡಕೋಳ್. ಬೆಮೆಲ್. ಬೆಂ. ರಾಮಚಂದ್ರ ಮತ್ತು ಸುಕುಮಾರ್. ಬೆಮೆಲ್. ಬೆಂ. ಡಿ.ಎಸ್. ಕೃಷ್ಣರಾವ್. ಬೆಮೆಲ್. ಬೆಂ. ಎಸ್. ಜಯರಾವ್. ಬೆಮೆಲ್. ಬೆಂ. ಕೆ. ಜಗದೀಶ್. ಬೆಮೆಲ್. ಬೆಂ. ಎಂ.ಎಂ. ಸತ್ಯನಾರಾಯಣಶೆಟ್ಟಿ, ಬೆಮೆಲ್. ಬೆಂ. ಜಿ.ರಾ. ವಿಶ್ವೇಶ್ವರರಾವ್. ಬೆಮೆಲ್. ಬೆಂ. ಸುಭಾಷ್. ಬೆಮೆಲ್. ಬೆಂ. ವಿ.ಆರ್. ವಸಂತಕುಮಾರ್. ಬೆಮೆಲ್. ಬೆಂ. ಈರೋಜಿರಾವ್, ಬೆಮೆಲ್. ಬೆಂ. ನಾರಾಯಣ ಸ್ವಾಮಿ. ಬೆಮೆಲ್. ಶಿವಾಜಿರಾವ್. ಬೆಮೆಲ್. ಬೆಂ. ಗುರುನಾಥ್. ಬೆಮೆಲ್. ಜಯಶಂಕರ ಪ್ರಕಾಶ್. ಬೆಮೆಲ್. ಬೆಂ. ವಾಸುದೇವರಾವ್, ಬೆಮೆಲ್, ಬೆಂ. ಲಕ್ಷ್ಮಣ. ಬಿ.ವಿ. ಬೆಮೆಲ್. ಬೆಂ. ಎಚ್.ಎಸ್. ಚಂದ್ರಶೇಖರ್. ಬೆಮೆಲ್. ಬೆಂ. ರಾಜಪ್ಪ. ಬೆಮೆಲ್. ಬೆಂ. ಅಂಕಪ್ಪ. ಬೆಮೆಲ್. ಬೆಂ. ಆರೀಫ್ ರೆಹಮಾನ್. ಬೆಮೆಲ್. ಬೆಂ. ಬಿ.ಎಸ್. ರಂಗಸ್ವಾಮಿ. ಬೆಮೆಲ್. ಬೆಂ. ಎಚ್.ಬಿ. ಸುದರ್ಶನ್ ಕುಮಾರ್. ಬೆಮೆಲ್. ಬೆಂ. ವ.ನ. ಸ್ವಾಮಿ, ಬೆಮೆಲ್. ಬೆಂ. ನಂಜುಂಡಪ್ಪ. ಬೆಮೆಲ್. ಬೆಂ. ಎಂ. ಹಂಪಣ್ಣ. ಬೆಮೆಲ್, ಬೆಂ. ಎಂ. ರವಿಕುಮಾರ್, ಬೆಮೆಲ್. ಬೆಂ. ಪಿ. ಚನ್ನಬಸಪ್ಪ. ಬೆಮೆಲ್. ಬೆಂ. ಎಂ. ಮಂಜುನಾಥ್, ಬೆಮೆಲ್, ಬೆಂ. ಶೇಷಗಿರಿರಾವ್. ಬೆಮೆಲ್. ಬೆಂ. ಸಿ.ಆರ್. ಗೋಪಾಲಕೃಷ್ಣ ಗೌಡ, ಬೆಮೆಲ್. ಬೆಂ. ಬಿ.ಓಬರಾಜು. ಬೆಮೆಲ್. ಬೆಂ. ಮುನಾಫ್. ಬೆಮೆಲ್. ಬೆಂ. ಕಾ.ಸಂ. ಜಯರಾಮಯ್ಯ. ಬೆಮೆಲ್. ಬೆಂ. ಎಸ್.ಪಿ. ಶಾರದಮ್ಮ, ಬೆಮೆಲ್, ಬೆಂ. ಸ.ನ. ಪ್ರಕಾಶ್. ಬೆಮೆಲ್. ಬೆಂ. ಎಲ್. ಮುನೆಜಿಸ್, ಬೆಮೆಲ್, ಬೆಂ. ಆ.ನ. ಜಯದೇವ. ಬೆಮೆಲ್. ಬೆಂ. ಪಿ.ಚ. ಶೇಖರ. ಬೆಮೆಲ್, ಬೆಂ. ಗಿರಿಯಪ್ಪ. ಬೆಮೆಲ್. ಬೆಂ. ಎಂ. ವಿಶ್ವನಾಥ್. ಬೆಮೆಲ್. ಬೆಂ. ಶಿವರಾಮಯ್ಯ, ಬೆಮೆಲ್. ಬೆಂ. ಮು.ರಾ. ಕೃಷ್ಣಪ್ಪ. ಬೆಮೆಲ್. ಬೆಂ. ಟಿ. ಬೀರಣ್ಣ, ಬೆಮೆಲ್, ಬೆಂ. ಡಿ.ಎಚ್.ಗೌಡ. ಬೆಮೆಲ್. ಬೆಂ. ರಮೇಶ ಸಾಲಗುಂದಿ, ಬೆಮೆಲ್, ಬೆಂ. ಪಿ. ರಂಗೇಗೌಡ. ಬೆಮೆಲ್, ಬೆಂ. ಡಿ.ಸಿ. ಶಿವಮೂರ್ತಿ, ಬೆಮೆಲ್. ಬೆಂ. ಆರ್. ಕುಮಾರ್. ಬೆಮೆಲ್. ಬೆಂ. ದಾ.ಪಾ. ಗುರುನಂಜಪ್ಪ, ಬೆಮೆ[illegible] ಎಸ್.

ಎಂ. ಗಂಜ್ಯಾಳ. ಬಿಮೆಲ್. ಬೆಂ. ಎಸ್.ಜಿ. ಇಂಗಳೆ. ಬಿಮೆಲ್. ಬೆಂ. ಆರ್.ಡಿ. ಪಾಟೀಲ. ಬಿಮೆಲ್. ಬೆಂ. ಚಂದ್ರಮೋಹನ್. ಬಿಮೆಲ್. ಬೆಂ. ವೀರಣ್ಣಕಮ್ಮಾರ. ಬಿಮೆಲ್. ಬೆಂ. ಗೋಪಾಲಪ್ಪ. ಬಿಮೆಲ್. ಬೆಂ. ಆರ್ ಗೋಪಾಲ. ಬಿಮೆಲ್. ಬೆಂ. ಶಮಂತೂರು ಶ್ರೀನಿವಾಸ ಭಟ್ಟ. ಬಿಮೆಲ್. ಬೆಂ. ಚೇ.ಮೋ. ನಂಜೇಗೌಡ. ಬಿಮೆಲ್. ಬೆಂ. ಗು. ಬ. ಹಲಗೀಮಠ. ಬಿಮೆಲ್. ಬೆಂ. ಪಿ. ನಾಗರಾಜ್. ಬಿಮೆಲ್. ಬೆಂ. ಪಿ.ಸಿ. ರಮೇಶ್. ಬಿಮೆಲ್. ಬೆಂ. ಸಂಗಣ್ಣ ಬೇಪಿನಾಳ್. ಬಿಮೆಲ್. ಬೆಂ. ಶಿವಪ್ರಸಾದ್. ಬಿಮೆಲ್. ಬೆಂ. ಮಂಜುನಾಥ್, ಬಿಮೆಲ್. ಬೆಂ. ಎಂ.ವಿ. ಶಂಕರ್. ಬಿಮೆಲ್. ಬೆಂ. ಲಕ್ಷ್ಮಣಾಚಾರ್. ಬಿಮೆಲ್. ಬೆಂ. ತಿಮ್ಮಯ್ಯ. ಬಿಮೆಲ್. ಬೆಂ. ಆರೋಕ್ಯಸ್ವಾಮಿ. ಬಿಮೆಲ್. ಬೆಂ. ಆರ್. ಡಿ. ಮೂರ್ತಿ ಬಿಮೆಲ್. ಬೆಂ. ಟಿ. ರಂಗಸ್ವಾಮಿ. ಬಿಮೆಲ್. ಬೆಂ. ತಿಪ್ಪೇರುದ್ರಸ್ವಾಮಿ. ಬಿಮೆಲ್. ಬೆಂ. ರಂಗನಾಥ್, ಬಿಮೆಲ್. ಬೆಂ. ಸಿ.ಎಸ್. ಸಾಲಿಮಠ, ಬಿಮೆಲ್. ಬೆಂ. ಮಾಧವ. ಬಿಮೆಲ್. ಬೆಂ. ಮೋಹನ್, ಬಿಮೆಲ್. ಬೆಂ. ಎಂ. ನಂಜುಂಡಪ್ಪ. ಬಿಮೆಲ್, ಬೆಂ. ಗಂಗಾಧರ. ಬಿಮೆಲ್. ಬೆಂ. ಎಚ್.ಎಸ್. ರಮೇಶ್. ಬಿಮೆಲ್. ಬೆಂ. ಬಿ. ಪೊಂಪಣ್ಣ. ಬಿಮೆಲ್. ಬೆಂ. ಮರಿಯಣ್ಣ. ಬಿಮೆಲ್. ಬೆಂ. ಮರಿಕೃಷ್ಣಯ್ಯ. ಬಿಮೆಲ್. ಬೆಂ. ನಾರಾಯಣರೆಡ್ಡಿ. ಬಿಮೆಲ್. ಬೆಂ. ಎಂ. ಚಂದ್ರೇಗೌಡ. ಬಿಮೆಲ್. ಬೆಂ. ಶ್ರೀನಿವಾಸ ಬಿಮೆಲ್, ಬೆಂ. ಬಿ.ಜಿ. ಅನಂತಾಚಾರ್. ಬಿಮೆಲ್, ಬೆಂ. ರುಕ್ಷ್ಮಯ್ಯ. ದೇವಾಡಿಗ. ಬಿಮೆಲ್. ಬೆಂ. ಮ. ಶ್ರೀಧರಗುಪ್ತ. ಬಿಮೆಲ್, ಬೆಂ. ಎಸ್.ವಿ. ಹಿರೇಮಠ, ಬಿಮೆಲ್, ಬೆಂ. ವಿ.ಬಿ. ರುದ್ರಪ್ಪ. ಬಿಮೆಲ್. ಬೆಂ. ತಿಮ್ಮರಾಜು. ಬಿಮೆಲ್. ಬೆಂ. ಕುಮಾರ್‌ಪ್ರಸಾದ್, ಬಿಮೆಲ್. ಬೆಂ. ರಾಮಚಂದ್ರ. ಬಿಮೆಲ್, ಬೆಂ. ಕೇಶವಮೂರ್ತಿ. ಬಿಮೆಲ್. ಬೆಂ. ಜಿ. ಸದಾನಂದರಾವ್. ಬಿಮೆಲ್. ಬೆಂ. ಸೆಲ್ವಕುಮಾರ್, ಬಿಮೆಲ್, ಬೆಂ. ಮಂಜುನಾಥ್. ಬಿಮೆಲ್, ಬೆಂ. ಫಣಿಭೂಷಣ. ಬಿಮೆಲ್, ಬೆಂ. ಬಿ.ಎ. ನಾಗೇಂದ್ರರಾವ್. ಬಿಮೆಲ್. ಬೆಂ. ಕೆ.ಎಸ್. ವೆಂಕಟೇಶ್. ಬಿಮೆಲ್. ಬೆಂ. ಉಮೇಶ್. ಬಿಮೆಲ್. ಬೆಂ. ವಿರೂಪಾಕ್ಷಪ್ಪ. ಬಿಮೆಲ್. ಬೆಂ. ಲಿಂಕಪ್ಪ. ಬಿಮೆಲ್. ಬೆಂ. ತಿಮ್ಮಯ್ಯ, ಬಿಮೆಲ್. ಬೆಂ. ಎನ್. ನಾಗೇಂದ್ರ. ಬಿಮೆಲ್. ಬೆಂ. ಎಂ. ಎಸ್. ವನಹಳ್ಳಿ. ಬಿಮೆಲ್. ಬೆಂ. ಮಲ್ಲಯ್ಯ, ಬಿಮೆಲ್. ಬೆಂ. ದೊಡ್ಡಸ್ವಾಮಿಗೌಡ. ಬಿಮೆಲ್. ಬೆಂ. ಕೆ. ವೆಂಕಟಸುಬ್ರಮ್ಹಣ್ಯ. ಬೆಂ. ಎಚ್.ವಿ. ಸ್ವರ್ಣಲತ. ಬೆಂ. ಎಚ್. ವಿ. ಸುಬ್ಬರಾಮಯ್ಯ, ಬೆಂ. ಎಚ್. ವಿ. ಶ್ರೀಕಂಠಯ್ಯ, ಮೈಸೂರು. ಬಿ.ಎನ್. ಅನಂತರಾಮು. ಬೆಂ. ಕೆ.ವಿ. ಗೋವಿಂದ. ಸಾಗರ. ಎಂ.ಆರ್. ಶ್ರೀನಿವಾಸ ಅಯ್ಯಂಗಾರ್. ಬೆಂ. ಎಂ.ಎಸ್. ರಾಮಸ್ವಾಮಿ ಅಯ್ಯಂಗಾರ್, ಕಾಂಚಿ. ಶಂಕರನಾರಾಯಣ. ಸಾ.ದೇ. ಬೆಂ. ಕ. ವ. ಶ್ರೀನಿವಾಸ. ಬೆಂ. ಶ್ರೀ ಚಂದ್ರಶೇಖರ, ಬೆಂ. ರಾಧಾಕೃಷ್ಣ. ಬೆಂ. ಉಷಾ. ಬೆಂ. ಭಾರತಿ. ಬೆಂ. ಜಯಮ್ಮ ಪ್ರಭಾಕರ್. ಬೆಂ. ಕ್ರೇಜಿ ಫ್ರೆಂಡ್ಸ್ ಅಸೋಸಿಯೇಷನ್. ಬೆಂ.

ಭಾಗ್ಯಲಕ್ಷ್ಮಿ. ಬೆಂ. ಮಾಲತಿ, ಬೆಂ. ವಸಂತಲಕ್ಷ್ಮಿ. ಬೆಂ. ವಿ.ಎಸ್. ರಾಘವನ್, ಬೆಂ. ವಿ. ಆರ್. ಚಂದ್ರನ್, ಬೆಂ. ಅಂಧಗಾರು ಶ್ರೀನಿವಾಸ. ಬೆಂ. ಬಿನ್ನಿಮಾರ್ಕ್ ಡ್ರೈ ಕ್ಲೀನರ್ಸ್, ಬೆಂ. ವಸಂತಲಕ್ಷ್ಮಿ. ಬೆಂ.

**ರೂ.** 3–00

ಎಚ್. ಶಿವಕುಮಾರ್, ಬೆಂ,

**ರೂ.** 2–00

ಒಬ್ಬ ಅಭಿಮಾನಿ, ಬೆಂ. ದೀಪಾ ಫೋಟೋಗ್ರಾಫಿಕ್. ಬೆಂ.

(ಒಟ್ಟು 231 ಜನರು.)

**ಈ ಎಲ್ಲ ಅಭಿಮಾನಿಗಳಿಗೂ ಪ್ರತಿಷ್ಠಾನ ಕೃತಜ್ಞತಾಪೂರ್ವಕ ವಂದನೆಗಳನ್ನು ಸಲ್ಲಿಸುತ್ತದೆ. ಮತ್ತು ಈ ಮಹತ್ಕಾರ್ಯಕ್ಕೆ ಮಹಾಜನತೆ ಉದಾರವಾಗಿ ಸಹಾಯ ಮಾಡಬೇಕೆಂದು ಕೋರುತ್ತದೆ.**

---

# ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನ

೫೪, ೩ನೆಯ ಅಡ್ಡಬೀದಿ, ಗವಿಪುರಂ ವಿಸ್ತರಣ, ಬೆಂಗಳೂರು–೧೯

## ಪ್ರತಿಷ್ಠಾನದ ಪ್ರಕಟನೆಗಳು

| | | |
|---|---|---|
| ೧. | ಕೀರ್ತನ ಕುಸುಮಾಂಜಲಿ<br>(ನಾರಾಯಣ ದಾಸರ ಕೀರ್ತನೆಗಳು) | ರೂ. ೧೦–೦೦ |
| ೨. | ಮಣಿಹ<br>(ದಿ॥ ಫ. ಗು. ಹಳಕಟ್ಟಿಯವರ ಸಂಸ್ಮರಣ ಸಂಪುಟ) | ೫೦–೦೦ |
| ೩. | ಬೇಂದ್ರೆ ಸ್ಮೃತಿ | ೫–೦೦ |
| ೪. | ಸರ್ವಜ್ಞ ವಚನಗಳು | ೧೫–೦೦ |
| ೫. | ಸೂತ ಭಾರತ | ೧೫–೦೦ |
| ೬. | ಧ್ರುವ ಚರಿತ್ರೆ<br>(ತಿಮ್ಮಪ್ಪದಾಸರ ಸಾಂಗತ್ಯ ಕೃತಿ) | ೧೫–೦೦ |
| ೭. | ಶ್ರೀ ಕೃಷ್ಣದೇವರಾಯನ ದಿನಚರಿ | ೧೦–೦೦ |
| ೮. | ಮೂರು ದತ್ತಿ ಉಪನ್ಯಾಸಗಳು | ೧೦–೦೦ |
| ೯. | ಹಸ್ತಪ್ರತಿ ಶಾಸ್ತ್ರ | ೧೫–೦೦ |

## ಬಿ. ಎಂ. ಶ್ರೀ. ಜನ್ಮಶತಮಾನೋತ್ಸವದ ಪ್ರಕಟನೆಗಳು

| | | |
|---|---|---|
| ೧. | ಆಚಾರ್ಯ ಬಿ.ಎಂ.ಶ್ರೀ.<br>(ಪ್ರೊ॥ ಎಲ್.ಎಸ್. ಶೇಷಗಿರಿ ರಾವ್) | ೨–೦೦ |
| ೨. | ಕನ್ನಡದ ಕಣ್ವ (ಹೊ. ಶ್ರೀನಿವಾಸಯ್ಯ) | ೧–೫೦ |
| ೩. | ಶ್ರೀ ವಾಣಿ (ಬಿ.ಎಂ.ಶ್ರೀ. ಸೂಕ್ತಿಗಳು) (ಡಾ॥ ಹಾ. ಮಾ. ನಾಯಕ) | ೧–೦೦ |
| ೪. | ಬಿ.ಎಂ.ಶ್ರೀ. ಭಾವಚಿತ್ರ | ೨–೦೦ |

## ಸಿದ್ಧತೆಯಲ್ಲಿ

೧. ಶ್ರೀನಿಧಿ (ಸಂಸ್ಮರಣ ಸಂಪುಟ)
೨. ಶ್ರೀಗಂಧ (ಸ್ಮರಣ ಸಂಚಿಕೆ) ('ಇಂಗ್ಲಿಷ್ ಗೀತಗಳು' ಮತ್ತು ಆಂಗ್ಲ ಮೂಲಗಳನ್ನು ಒಳಗೊಂಡಿರುತ್ತದೆ.
೩. ಶ್ರೀಯವರ ನಾಟಕಗಳ ಗದ್ಯಾನುವಾದ
೪. ಶ್ರೀಯವರ ನಾಟಕ ಕಥೆಗಳು
೫. ಆಯ್ದ 'ಇಂಗ್ಲಿಷ್ ಗೀತಗಳು'

ಶ್ರೀ ಲಕ್ಷ್ಮಿ ಪ್ರಿಂಟರ್ಸ್. ನಂ. 6, 14ನೇ ಅಡ್ಡರಸ್ತೆ, ಪಾದರಾಯನಪುರ, ಬೆಂಗಳೂರು–26.